॥ಶ್ರೀ ದತ್ತರಾಜಸಮರ್ಥ ॥

ಸಾಂಗ್ರ ಸಂಗೀತ

# ಚವತಿಯ ಚಂದ್ರ

— ಇದು —

ಸ್ವಜನೋದ್ಧಾರ, ಮಾತೃ-ಬಂಧವಿಮೋಚನ, ಕಬೀರದಾಸ, ಶರಣಬಸವ,
ವಿಷಮವಿವಾಹ, ವತ್ಸಲಾಹರಣ, ಪಾದುಕಾಪಟ್ಟಾಭಿಷೇಕ,
ಸುದಾಮದೇವ, ಇತ್ಯಾದಿ ನಾಟಕಗ್ರಂಥಗಳ ಕರ್ತರಾದ

ಗದಗ

ಶ್ರೀ ದತ್ತಾತ್ರಯ ಕರ್ನಾಟಕ ಸಂಗೀತ ನಾಟಕ ಮಂಡಳಿಯ

ವ್ಯವಸ್ಥಾಪಕ

“ ಸದಾಶಿವರಾವ ಗುರುನಾಥ ಗರೂಡ ”

ಇವರಿಂದ ರಚಿಸಲ್ಪಟ್ಟು ಪ್ರಚುರಗೊಳಿಸಿತು.

೧೯೨೯

ಬೆಲೆ ೧ ರೂ.

ಶ್ರೀ ದತ್ತರಾಜ ಸಮರ್ಥ

# ಮುನ್ನುಡಿ.



ಅಂತಹ ಕೇವಲ ಪುರುಷೋತ್ತಮನಾದ ಶ್ರೀಕೃಷ್ಣನು ಸ್ಥಾಪಿಸಿದ ದ್ವಾರಕೆಯ ಸಾಮ್ರಾಜ್ಯವು ಆತನ ಅಸ್ತಿತ್ವದಲ್ಲಿಯೇ ಲಯವಾಯಿತು. ಹಾಗಾಗಬೇಕಾದರೆ ಆತನಲ್ಲಿ ಪುಣ್ಯಬಲವಷ್ಟಿದ್ದಿಲ್ಲವೆಂದಾಗುವದು. ಸಾಮಾನ್ಯ ಜನರು ಸ್ಥಾಪಿಸಿದ ಸಂಸ್ಥೆಗಳಾಗಲಿ, ಅಥವಾ ರಾಜ್ಯಗಳಾಗಲಿ, ಅವರ ಪಶ್ಚಾತ್ ಕನಿಷ್ಠ ಒಂದೆರಡು ತಲೆಗಳ ತನಕಾದರೂ ನಡೆಯುವವು. ಅಂತಹದು ಯಾವಾತನು ತನ್ನ ಮಹತ್ಕೃತಿಗಳಿಂದ ನಾರಾಯಣನ ಅವತಾರಿಯೆಂದೆನಿಸಿ; ಭಾರತದಂತಃಕರಣದಲ್ಲಿ ಶಾಶ್ವತವಾಗಿ ನಿಂತಿಹನೋ, ಅಂತಹ ವಿಭೂತಿಯ ರಾಜ್ಯವೂ, ಮತ್ತೂ ಅತನ ಜನಾಂಗದ ಅಧಃಪತನವೂ ಅಷ್ಟು ತೀವ್ರವಾದ ಕಾರಣಗಳ ವಿಚಾರವನ್ನು ಮಾಡುವಾಗ್ಗೆ ಪ್ರಸ್ತುತ ಕಥೆಯಲ್ಲಿ ಆ ಕಾರಣವು ಪ್ರಾರಂಭವಾದದ್ದು ಕಂಡು ಬಂತು. ದನಕರುಗಳನ್ನು ಕಾಯ್ದುಕೊಂಡು ವನವನ ಅಲೆದಾಡುವ ಯಾದವರನ್ನು ಶೂರರಾದ ಕ್ಷತ್ರಿಯರೆಂದು ಸಿದ್ಧಮಾಡಿದವನು ಶ್ರೀ ಕೃಷ್ಣನು. ಇಡೀ ಭೂಮಂಡಲದ ಸಾಮ್ರಾಟನಾಗುವದು ಸಾಧ್ಯವಿದ್ದರೂ, ಯಾರ ದೇಶಕೋಶಗಳನ್ನಪಹರಿಸದೆ ಸಕಲ ಭೂಪಾಲಕರೂ ಬಿಟ್ಟುಕೊಟ್ಟ ಮಳಲರಾಶಿಯ ಮೇಲೆ ತನ್ನ ದ್ವಾರಕೆಯನ್ನು ಕಟ್ಟಿಕೊಂಡ ಮೂರ್ತಿಮಂತ ನಿಃಸ್ವಾರ್ಥಿಯೆಂದರೆ ಶ್ರೀ ಕೃಷ್ಣನು. ಗುಣಕರ್ಮಾದಿಗಳಿಂದಲೇ ಮಾನವರ ಉಚ್ಚ, ನೀಚತ್ವವನ್ನು ನಿರ್ದಾಕ್ಷಿಣ್ಯವಾಗಿ ನಿರ್ಣಯಿಸುವ ಪಾಠವನ್ನು ಕಲಿಸಿದ ಪರಮೋದಾರಿಯೆಂದರೆ ಶ್ರೀ ಕೃಷ್ಣನು. ಇಂತಹ ಆದರ್ಶ ಮುಂದಾಳುವಿನ ವಿಷಯಕವಾದ ಮತ್ಸರವು ಯಾದವರಲ್ಲಿ ಬೆಳೆದದ್ದು ಅವರ ದೌರ್ಭಾಗ್ಯವಲ್ಲದೆ ಮತ್ತೇನು ? ಸಕಲ ದೇವಗುಣರೂಪಾದಿಗಳಿಂದ ಮಂಡಿತನಾದ ಆ ನರೋತ್ತಮನನ್ನು ಇಡೀ ಜಗವೂ ಕೊಂಡಾಡುತ್ತಿರುವಾಗ್ಗೆ

ಆತನನ್ನು ಕಳ್ಳನೆಂದೂ, ಕೊಲೆಪಾತಕನೆಂದೂ, ನಿರ್ದಯರಾಗಿ ಹೇಳುವ ಜನಾಂಗಕ್ಕೆ ಆ ಮಹಾಪುರುಷನ ಶಾಪವು ತಗಲದೇ ? ಯದ್ಯಪಿ ಶ್ಯಮಂತಕಮಣಿಯು ಬಂಗಾರವನ್ನು ಹೆರೆಯುವ ದಿವ್ಯ ಮಣಿಯಾಗಿದ್ದರೂ ಅದು ದರಿದ್ರನಿಗೆ ದೊಡ್ಡದಿರಬಹುದು. ಷಡ್ಗುಣೈಶ್ವರ್ಯ ಸಂಪನ್ನನಾದ ಯೋಗೀಶ್ವರನದನ್ನು ಗಣಿಸತಕ್ಕವನೇ ? ಅಂತಹ ವಿಭೂತಿಯ ಮೇಲೆ ಕೊಲೆ, ಸುಲಿಗೆಯ ಆರೋಪವನ್ನು ಹೊರಿಸುವ ಜನಾಂಗದ ಸರ್ವನಾಶವಾಗುವದರಲ್ಲಿ ಜಗದ ಕ್ಷೇಮವೆಂದು ಆ ಯೋಗಿಶ್ವರನ ಯೋಗವು ಪಕ್ಷಪಾತವಿಲ್ಲದೆ ನೆನೆದದ್ದು ಯೋಗ್ಯವೆ ? ಅಸ್ತು. ಪ್ರಸ್ತುತಾಖ್ಯಾನದಲ್ಲಿ ಕಥಾವಸ್ತುವಿಗೆ ಬಾಧಕವಾಗದೆ, ಸಾಧಕವಾಗುವ ಕೆಲವು ಯುಕ್ತಿ ಸಮ್ಮತ ಬದಲಾವಣೆಗಳನ್ನು ಮಾಡಿಕೊಂಡಿದ್ದೇವೆ. ಆ ಬದಲಾವಣೆಯೇ ವಸ್ತುಸ್ಥಿತಿಯೆಂದು ನನ್ನ ನಂಬಿಗೆ. ಸೂಜ್ಞರು ನನ್ನಾಶಯವನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಇತಿ.

ಗ್ರಂಥಕರ್ತ:– **ಸದಾಶಿವ ಗುರುನಾಥ ಗರೂಡ,**

ನಾಟಕಾಲಂಕಾರ, ಅಭಿನಯಕೇಸರಿ.

---

**ವಿ. ಸೂ–** ಈ ನಾಟಕವನ್ನು ಅಭಿನಯಿಸಲಿಚ್ಛಿಸುವವರು ನಮ್ಮ ಅಪ್ಪಣೆಯನ್ನು ಪಡೆಯಬೇಕು. 

–ಗ್ರಂಥಕರ್ತ

—ಃ ಶ್ರೀ ದತ್ತರಾಜ ಸಮರ್ಥ ಃ—



# ಚವತಿಯ ಚಂದ್ರ ನಾಟಕವು.



## ಪ್ರಥಮಾಂಕವು.



ರಾಗ. ಹಮೀರ. ತಾಳ. ತ್ರಿವಟ.

### ॥ ನಾಂದಿ ॥

ಶ್ರೀ ಗುರುವರದಯ | ದೊರೊ । ಜವ | ಬಾಽ ರೊ ॥ ಪಲ್ಲ ॥
ನಿಗಮಾಗಮಗೋ । ಚರಸುರ ಸೇವ್ಯಾ ? | ಯೋಗಿವರ್ಯಾ ॥
ಪರಮೌದಾರ್ಯದಿ ಮಾನವತನುವಾ |
ಕರುಣಿಸಿ ನಿನ್ನಯಾ । ಚರಣಾಬ್ಜಗಳಾ |
ಮರೆವಾಗುವ ತೆರ ಮಾಡುವದೇಕೆ? |
ಕರುಣಾರ್ಣವನಿನಗಿದು ತರವೇನೈ ॥

### ॥ ೨ ನೇ ಪದ ॥

ರಾಗ. ಖಮಾಜ. ತಾಳ. ತ್ರಿವಟ.

ದೀನ ಜನರ ಪಾಲಾ । ತವ ಪದಕಮಲವು ಭವಜಲಧಿಗೆ'
ಇಹುದದು ನೌಕೆ ॥ ಪಲ್ಲ ॥
ಆಸರವಾನೀಡೈ ದಯಮಾಡಿ। ನೌಕೆಯೊಳ್ ಶರಧಿ |
ಯನೂದಾಂಟಿಸಲೂ ॥ ೧ ॥

## ಸೂರ್ಯಪ್ರವೇಶ.

( ಪ್ರಸೇನನು ಧ್ಯಾನಮಗ್ನನಾಗಿ ನಿಂತಿರುವನು. )

**ಸೂರ್ಯ**- ಕಂದ

ಕುವರನೆ ನಿನ್ನ ದಿವ್ಯ ತಪವನ್ನವಲೋಕಿಸಿ । ಮೋದವನಾಂತುನಾ !
ನವನಿಯೊಳಾವ ಮಾನವನಿಗೂ ಸಿಗಲಾರದ !
ರತ್ನರಾಜವಂ । ತವಕದಿನೀಡುವೆ ತೆಗೆದುಕೊ ।
ಇದು ನಿತ್ಯದಿನೇಮದಿಂದಲಿ ಭುವಿಯೊಳು। ನೀಡಿಕಾಯುವದು ।
ವೆಗ್ಗಳ ಚಿನ್ನವಂ ತನ್ನ ಭಕ್ತರಾ ॥

ಭಕ್ತನಾದ ಪ್ರಸೇನನೇ ಜೋಕೆ! ಈ ಮಣಿಯನ್ನು ಕಳೆದುಕೊಳ್ಳಬೇಡ. ಇದು ಶ್ಯಮಂತಕ ಮಣಿಯಾಗಿದೆ.

**ಪ್ರಸೇನ**- ( ಕಣ್ತೆರೆದು ) ಅಹಹ! ದಯಾಳುವಾದ ಸೂರ್ಯದೇವನೇ? ಕೊನೆಗೆ ನನ್ನ ಮರೆಯನ್ನು ಕೇಳಿ ಈ ದಿವ್ಯ ರತ್ನವನ್ನು ನನಗೆ ದಯಪಾಲಿಸಿದೆಯಾ ನಿನಗೆ ಪುನಃ ಪುನಃ ನಮಿಸುವೆನು.

**ಸೂರ್ಯ**- ಭಕ್ತನಾದ ಪ್ರಸೇನನೇ! ಈ ಮಣಿಯು ಕೊಡುತ್ತಿರುವ ವಿಪುಲ ಚಿನ್ನವನ್ನು ಸತ್ಕಾರ್ಯದಲ್ಲಿ ವಿನಿಯೋಗ ಮಾಡು; ಬರುವೆನು. ನಿನಗೆ ಜಯವಾಗಲಿ. ( ಅಂತರ್ಹಿತನಾಗುವನು. )

**ಪ್ರಸೇನ**- ( ಮುಂದೆ ಬಂದು ) ಸೂರ್ಯನಾರಾಯಣನು ಇದು ನಿತ್ಯದಲ್ಲಿಯೂ ವಿಪುಲ ಚಿನ್ನವನ್ನೀಯುವ ಶ್ಯಮಂತಕಮಣಿಯೆಂದು ಹೇಳಿದನಲ್ಲವೇ ? ಈಗ್ಗೆ ನೀಡುವದೇನು ? ನೋಡಲೋ! ಎಲೋ! ಮಣಿರಾಜನೇ ?

ದೇವೀ ಮೀನಾಕ್ಷಿ= ಎಂಬಂತೆ.

||**ಪದ**|| ನೀಡೈ ಭಂಗಾರವನೂ। ಬೇಡುವೆ ಕರವಮುಗಿದು ನಿನಗೆ ॥ ಪಲ್ಲ ॥
ಪೊಡವಿಯೊಳು ಧನ್ಯನನ್ನು। ಮಾಡು ನಿನಗೆ ಮೊರೆ ಬಂದಿಹೆ ।
ಬಡವನನ್ನು ಬಲ್ಲಿದನಂ। ಮಾಡಿ ಜವದಿ ಮಣೆಯೆ ॥
ಜಡಜಮಿತ್ರನೌದಾರ್ಯದಿ। ಜನಿಸಿ ಬಂದು ಎನ್ನ ಬಳಿಗೆ।
ಕಡುತೇಜೋಮಯ ರೂಪವ। ಪಡೆದ ರತ್ನಸಂಪ್ರಾಟವೆ ॥ ೧ ॥

( ಸುವರ್ಣರಾಶಿಯಾಗುವದು ) ನಿಜವಾಗಿಯೂ ಚಿನ್ನವನ್ನೇ ಸುರಿಸುತ್ತಿರುವದು. ನಿತ್ಯದಲ್ಲಿಯೂ ಇಷ್ಟು ಚಿನ್ನವನ್ನು ಕೊಡುತ್ತಿರುವದಲ್ಲವೇ ? ಸೈ. ಸೈ. ಸರಿಯಾದ ಫಲವು ಸಿಕ್ಕಿತು. ಇದರ ಬಲದಿಂದ ಸ್ವಲ್ಪ ಕಾಲ

ದಲ್ಲಿಯೇ ನಾನು ಮೇದಿನಿಯ ಕುಬೇರನಾಗುವೆನು. ಆಮೇಲೇನು? ಈ ಭೂಮಂಡಲದ ರಾಜಾಧಿರಾಜರು ನನಗೆ ವಿಧೇಯರಾಗಿ ವರ್ತಿಸಲಿಕ್ಕೇ ಬೇಕು. ಅಥವಾ ರಾಜಾಧಿರಾಜನಾದರೂ ಏತಕ್ಕೆ ಆಗಬಾರದು? ಜಗದ ಕುಬೇರನೆನಿಸಿಕೊಳ್ಳುವದಕ್ಕಿಂತಲೂ ರಾಜಾಧಿರಾಜನೆನಿಸಿಕೊಳ್ಳುವದು ಲೇಸಲ್ಲವೇ? ಈ ಮಣಿಯ ಬಲದಿಂದ ಅಗಣಿತವಾದ ಸೈನ್ಯವನ್ನೂ ಕಡು ಗಲಿಗಳಾದ ಅತಿರಥಿ ಮಹಾರಥಿಗಳನ್ನೂ ಸಾಕುವೆನು. ಮತ್ತು ತದ್ವಾರಾ ಸಕಲ ಭೂಮಂಡಲವನ್ನೂ ಪಾದಾಕ್ರಾಂತ ಮಾಡಿಕೊಳ್ಳುವೆನು. ಯಾದವ ಮಂಡಲವೆಲ್ಲವೂ ಆ ಕೃಷ್ಣರಾಜನಿಗಿಂತಲೂ ನನಗೆ ಹೆಚ್ಚಿನ ಮರ್ಯಾದೆಯನ್ನು ಕೊಡಬೇಕಾಗುವದು. ಯಾಕಂದರೆ ನಾನು ಕುಬೇರನು. ಈ ಭೂಮಂಡಲದ ಕುಬೇರನು. ಅಥವಾ ಬ್ರಹ್ಮಾಂಡದ ಕುಬೇರನು.

**ನಾರದ**- (ಅವಸರದಿಂದ ಬಂದು) ಯಾರಯ್ಯಾ? ಬ್ರಹ್ಮಾಂಡದ ಕುಬೇರನು?

**ಪ್ರಸೇನ**- ಯಾರು ಹೀಗೆ ಕೇಳಿದವರು? (ನೋಡಿ) ನಾರದಮಹಾಮುನಿಗಳೇನು?

**ನಾರದ**- ಅಹುದಹುದು. ನಾರದ ಮುನಿಗಳೇ. ಹೇಳು ಹೇಳು ಪ್ರಸೇನಾ! ಬ್ರಹ್ಮಾಂಡದ ಕುಬೇರನಾರು?

**ಪ್ರಸೇನ**- ಯಾರೆಂದರೆ! ನಾನು.

**ನಾರದ**- ಅದು ಹೇಗೆ?

**ಪ್ರಸೇನ**- ಸ್ವಾಮೀ ಈಗ್ಗೆ ಹನ್ನೆರಡು ವರ್ಷಗಳಾಚೆಗೆ ನೀವು ಒಂದು ಸಾರೆ ನಮ್ಮ ಮನೆಗೆ ಬಂದಿದ್ದಿಲ್ಲವೇ?

**ನಾರದ**- ಬಂದಿದ್ದರೂ ಬಂದಿರಬಹುದು.

**ಪ್ರಸೇನ**- ಆಗ್ಗೆ ಮಾನವನು ಸಂಪತ್ತಿವಾನನಾಗುವ ಅನೇಕ ಕ್ರಮಗಳನ್ನು ಹೇಳಿದ್ದಿರಿ.

**ನಾರದ**- ಹೇಳಿದ್ದರೂ ಹೇಳಿರಬಹುದು.

**ಪ್ರಸೇನ**- ಆ ಕ್ರಮಗಳೊಳಗಿನ ಒಂದು ಕ್ರಮವನ್ನನುಸರಿಸಿ ನಾನೀಗ್ಗೆ ಬ್ರಹ್ಮಾಂಡದ ಕುಬೇರನಾಗಿದ್ದೇನೆ. ಕುಬೇರನು.

**ನಾರದ**- ಹಾಗೆ ನೀನು ಬ್ರಹ್ಮಾಂಡದ ಕುಬೇರನಾದದ್ದಕ್ಕೆ ಸಾಕ್ಷಿಯೇನು?

**ಪ್ರಸೇನ**- ( ಸುವರ್ಣ ರಾಶಿಯನ್ನು ತೋರಿಸಿ ) ಇದೋ ನೋಡಿ ಇದೇನು?

**ನಾರದ**- ಇದು ಪರಿಶುದ್ಧವಾದ ಸುವರ್ಣವಾಗಿದೆ. ಅಮಮಾ ವಿಪುಲವಾಗಿ ಬಿದ್ದುಬಿಟ್ಟಿದೆ. ಕುಬೇರನ ಅಲಕಾವತಿಯಲ್ಲಿ ಸಹ ಹೀಗೆ ಬಲ್ಲಹಾಗೆ ಬಿದ್ದಿರುವದಿಲ್ಲ. ಇಷ್ಟೊಂದು ಸುವರ್ಣವನ್ನು ಇಲ್ಲಿ ಯಾರು ಚಲ್ಲಿಬಿಟ್ಟಿದ್ದಾರಯ್ಯಾ ?

**ಪ್ರಸೇನ**- ಯಾರೆಂದರೆ ನಾನು. ಸ್ವಾಮೀ ನಾನು.

**ನಾರದ**- ಹೀಗೆ ಹಾದಿ ಬೀದಿಗಳಲ್ಲಿ ಸುವರ್ಣವನ್ನು ಚಲ್ಲಿದರೆ ಮಾತ್ರ ನಿನಗೆ ಬ್ರಹ್ಮಾಂಡದ ಕುಬೇರನೆಂದು ನಿಶ್ಚಯವಾಗಿ ಹೇಳಬಹುದು. ಅಯ್ಯಾ! ಪ್ರಸೇನನೇ! ವಿಪುಲ ಚಿನ್ನವನ್ನು ಪ್ರಸವಿಸುವ ಶ್ಯಮಂತಕ ಮಣಿಯನ್ನೇನಾದರೂ ಸಂಪಾದಿಸಿದಿಯೇನೊ?

**ಪ್ರಸೇನ**- ಸರಿಯಾಗಿ ಹೇಳಿದಿರಿ ಇದೋ ಶ್ಯಮಂತಕ ಮಣಿಯನ್ನೇ ಸಂಪಾದಿಸಿರುವೆನು.

**ನಾರದ**- ಸೈ. ಸೈ. ಘನಸಾಹಸವು! ಪ್ರಸೇನನೇ! ನಿನ್ನ ಸಾಹಸದಿಂದ ಯಾದವ ರಾಜ್ಯದ ಕೀರ್ತಿಯು ಇನ್ನೂ ವಿಸ್ತಾರವಾಗುವದು. ನಿನ್ನಂಥ ಬ್ರಹ್ಮಾಂಡದ ಕುಬೇರನು ತನ್ನ ಪ್ರಜಾವರ್ಗದಲ್ಲಿರುವಾಗ್ಗೆ ಆ ಯಾದವೇಂದ್ರರು ಎಂತಹ ಧನ್ಯರು? ಇರಲಿ. ಈಗ್ಗೆ ನೀನು ದ್ವಾರಕೆಗೆ ಹೋಗುವಿಯಷ್ಟೇ!

**ಪ್ರಸೇನ**- ಅಹುದು ಸ್ವಾಮಿ. ( ನಮಸ್ಕಾರ ಮಾಡದೆ ಹೋಗುವನು. )

**ನಾರದ**- ಹಾಗಾದರೆ ನಡೆ ನಿನಗೆ ಶುಭವಾಗಲಿ. ( ತಿರುಗಿ ನೋಡಿ ) ಪ್ರಸೇನನೆಲ್ಲಿ? ಅದೋ ಅಲ್ಲಿ ಹೋಗುತ್ತಲಿದ್ದಾನೆ. ನಾವು ಗಾಳಿಗೇನೇ ಆಶೀರ್ವಾದ ಮಾಡಿದಂತಾಯಿತು. ನಮಸ್ಕಾರವಿಲ್ಲದೇ ಆಶೀರ್ವಾದವನ್ನು ಬಿಸುಟುವ ಇದೊಂದು ಹೊಸ ಮಾದರಿಯು ನಮ್ಮಿಂದಲೇ ಪ್ರಾರಂಭವಾಯಿತು. ಅಸ್ತು ಶ್ಯಮಂತಕ ಮಣಿಯ ಲಾಭದಿಂದ ಪ್ರಸೇನನಂತೂ ಗರ್ವಿಷ್ಠನಾಗಿದ್ದಾನೆ. ಈ ಗರ್ವವು ಇವನಲ್ಲಿ ಹಾಗೇ ಬೆಳೆಯುತ್ತ

ಹೋದರೆ ಮುಂದೆ ಅದು ಅವನ ವಿನಾಶಕ್ಕೆ ಕಾರಣವಾಗುವದು. ಅಥವಾ ಶ್ರೀ[illegible]ಷ್ಣ ಪ್ರಜಾವರ್ಗದವರಿಗೆ ಗರ್ವವು ತರವಲ್ಲ. ಪ್ರಯುಕ್ತ ಇವನಿಗೆ ಕೆಲಮಟ್ಟಿಗಾದರೂ ಬುದ್ಧಿ ನಾದವನ್ನು ಮಾಡುವಾ.

ಜಿಂದಿರಾಬನಸಾರಂಗ- ಕೇರವ.

॥ **ಪದ** ॥ ಜಾನಕಿ ಜೀವನನೇ । ಮನೋಜ್ಞನೆ ॥ ಘನಮಹಿಮಾಕರ ದೇವನೆ ।
ವನಜಾಕ್ಷನೆ ನೆನೆವರಾಪ್ತ ನೀನೇ। ಅನವರತಾ ತವ ನಾಮವ । ನೆಲಿಸೈ
ಮಮರಸನೆಯೊಳು ರಾಮನೆ ॥ ೧ ॥

**ಡಂಗುರದವ**- ( ಪ್ರವೇಶಿಸಿ )

॥ ಭಾಮಿನಿಷಟ್ಪದಿ ॥

॥ **ಪದ** ॥ ಕೇಳಿರಿ! ಪೌರವರೆಯನ್ನಯ । ಸಾರುತಿಹ ಡಂಗುರದ ವಚನವ ।
ಹೇಳು ಸುದ್ದಿಯ ಸಾರುತಿಹೆನೆಂದೆಂದು ನಗಬೇಡಿ ।
ಬಾಳುವೆಯು ಬಂಗಾರವಾಗುವ ಕಾಲ ವದಗಿದೆ ಈಗಳೇಕರು ।
ಣಾಳು ದೇವನ ದಯದಿ ಬಿಕ್ಷುಕ ಜನವೆ ತ್ವರೆಮಾಡಿ ॥

**ಬಾಹ್ಮಣ**- ( ಬಂದು ) ಎಲೋ! ಏನೋ ಅದು ಬಡವರ ಬಾಳುವೆಯು ಬಂಗಾರವಾಗುವದೆಂದು ಹೇಳಿದೆಯಲ್ಲಾ ಅದು ಹೇಗೆ?

**ಡಂಗುರದವ**- ಕಂದ.

॥ **ಪದ** ॥ ಸತ್ರಾಜಿತ ಸಹೋದರರೂ । ಪ್ರಸೇನರೆಂಬ ಯಾದವ ವೀರರು ।
ಸುವರ್ಣ ದಾನವನೆ ಮಾಡುವರೊ। ತೀವ್ರವಾಗಿ ನಡಿಯಿರೀ ॥

**ಬ್ರಾಹ್ಮಣ**- ಏನು ಸುವರ್ಣ ದಾನವನ್ನು ಮಾಡುವರೇ ?

**ಡಂಗುರ**- ಅಹುದು ಸ್ವಾಮಿ! ವಿಪುಲವಾಗಿ ದಾನ ಮಾಡುತ್ತಿರುವರು. ತೀವ್ರ ಹೋಗಿ. ( ಪೂರ್ವೋಕ್ತ ಪದವನ್ನು ಹೇಳುತ್ತ ಹೋಗುವನು. )

**ಬಾಹ್ಮಣ**- ಏನೇ! ಏನೇ! ಬೇಗ ಬಾರೇ ?

**ಬ್ರಾಹ್ಮಣಿ**- ಏನದು ?

**ಬ್ರಾಹ್ಮಣ**- ಈಗ್ಗೆ ಡಂಗುರದವನು ಹೇಳಿದ್ದನ್ನು ಕೇಳಲಿಲ್ಲವೇ ?

**ಬ್ರಾಹ್ಮಣಿ**- ಕೇಳಿದೆನು ಪ್ರಸೇನನು ಸುವರ್ಣ ದಾನ ಮಾಡುತ್ತಲಿದ್ದಾನೆಂದು ಹೇಳಿದನು.

**ಬ್ರಾಹ್ಮಣ**- ಅಂದಮೇಲೆ ಆಲಸ್ಯವೇಕೆ? ನಡೆ ಹೋಗುವ. ನಾವು ವಿಪುಲವಾಗಿ ಸುವರ್ಣ ದಾನವನ್ನು ಪಡೆದುಕೊಂಡು ಬರುವಾ.

**ಬ್ರಾಹ್ಮಣಿ**- ಸುವರ್ಣ ದಾನವನ್ನು ಮಾಡುವದಕ್ಕೆ ಅವನೇನು ಶ್ರೀಕೃಷ್ಣ ಮಹಾರಾಜನೆಂದು ತಿಳಿದಿರುವಿರಾ? ಸುವರ್ಣ ದಾನವನ್ನು ಮಾಡುವ ನಂತೆ ಸುವರ್ಣ ದಾನವನ್ನು? ಬನ್ನಿಯ ತೊಪ್ಪಲವನ್ನೇನಾದರೂ ಹಂಚುತ್ತಿರಬಹುದು.

**ಕೆರೆಯಲ್ಲಿ**- ನೀನು ಮೊದಲು ತೋರಿಸೋ? ನೀನೇ ಮೊದಲು ತೋರಿಸೋ?

**ಬ್ರಾಹ್ಮಣ**- ಯಾರದು ವಾದವು ಬಹು ರಭಸವಾಗಿ ನಡೆದದೆ.

( ಇಬ್ಬರು ಹುಡುಗರು ವಾದಿಸುತ್ತ ಬರುವರು. )

**೧ನೇ ಹುಡುಗ**- ಮೊದಲು ತೋರಿಸು ನಿನಗೆಷ್ಟು ಸಿಕ್ಕಿದೆ?

**೨ನೇ ಹುಡುಗ**- ನೀನೇ ಮೊದಲು ತೋರಿಸು.

**ಬ್ರಾಹ್ಮಣಿ**- ( ನೋಡಿ ) ಒಬ್ಬನು ನಮ್ಮ ನೆರೆಮನೆ ಕನಕಲಕ್ಷ್ಮಕ್ಕನ ಮಗ ಚಿಂತಾಮಣಿಯಾಗಿದ್ದಾನೆ.

**ಬ್ರಾಹ್ಮಣ**- ಮತ್ತೊಬ್ಬನು ಪದ್ಮನಾಭಾಚಾರ್ಯರ ಮಗ ಪಾಂಚಜನ್ಯನಾಗಿದ್ದಾನೆ. ಎಲೋ ಏನ್ರೋ ಗಲಾಟೆ?

**ಪಾಂಚಜನ್ಯ**- ಏನೂ ಇಲ್ಲ ದೊಡ್ಡಪ್ಪಾ! ನಾನೂ ಈ ಚಿಂತಾಮಣಿಯೂ ಈರ್ವರೂ ಸೇರಿ ಪ್ರಸೇನ ಸರ್ದಾರರ ಮನೆಗೆ ಸುವರ್ಣ ದಾನವನ್ನು ಪಡೆದುಕೊಂಡು ಬರುವದಕ್ಕಾಗಿ ಹೋಗಿದ್ದೆವು. ಯಾರಿಗೆಷ್ಟು ಸುವರ್ಣವು ಸಿಕ್ಕಿದೆಯೆಂದು ನೋಡಿಕೊಳ್ಳುತ್ತಿದ್ದೆವು.

**ಇಬ್ಬರೂ**- ಏನು ಸುವರ್ಣ ದಾನವನ್ನು ಪಡೆದುಕೊಂಡು ಬಂದಿರಾ?

**ಚಿಂತಾಮಣಿ**- ಅಹುದು ದೊಡ್ಡಪ್ಪಾ ಇದೋ ನೋಡಿ.

**ಬ್ರಾಹ್ಮಣಿ**- ಹಿತ್ತಾಳಿಯಾಗಿರಬಹುದು ಹಿತ್ತಾಳಿ.

**ಬ್ರಾಹ್ಮಣ**- ಎಲ್ರೊ! ನೋಡುವಾ?

**ಚಿಂತಾಮಣಿ**- ( ತೋರಿಸಿ ) ದೊಡ್ಡಮ್ಮಾ! ಹಿತ್ತಾಳಿಯಾಗಿದ್ದರೆ ಈ ದ್ವಾರಕಿಯ ಜನರು ಪ್ರಸೇನ ಸರ್ದಾರರ ಮನೆಗೆ ಹಾಗೆಂದಿಗೂ ಮುತ್ತಿಗೆ ಹಾಕುತ್ತಿದ್ದಿಲ್ಲ. ತಿಳಿಯಿತೆ! ( ಹೋಗುವರು )

**ಮುದುಕಿ**- ಅರಗಿನ ವಡವೆಗಳನ್ನು ಮಾಡಿಸುವದು ಬೇಡ ಬೇಡ. ಗಟ್ಟಿ ವಡವೆಗಳಾಗಬೇಕು ಗಟ್ಟಿ.

**ಮುದ್ಕುಕ**- ಅದೂ ನಿಜ ನಾಲ್ಕೊಪ್ಪತ್ತು ಬಾಳಬೇಕಲ್ಲವೇ?

**ಬ್ರಾಹ್ಮಣ**- ಏನು ಏನು ವಾಸುತಾತಾ ಏನದು ಗಲಭೆ?

**ಮುದುಕಿ**- ನನಗೊಂದು ಜೋಡು ಗೋಟು, ಪಾಟ್ಲಿ, ವಂಕಿ, ಸರಿಗೆ, ನಾಗ ಮುರಿಗಿ, ದಾಬು, ತೋಡೆ, ಕ್ಯಾದಗಿ, ರಾಗಟೆ.

**ಮುದುಕ**- ನನಗೆ ಸೌಟು, ಥಾಲಿ, ತಂಬಿಗೆ, ನಿರಾಜಿನ, ಹಲಗಾರತ್ರಿ, ಧೂಪಾರತಿ ಯಲ್ಲಾ ಭಂಗಾರದ್ದೇ ಮಾಡಿಸಿಬಿಡುವಾ. ನಾಲ್ಕೊಪ್ಪತ್ತು ಬಾಳಬೇಕಲ್ಲವೇ?

**ಬ್ರಾಹ್ಮಣ**- ನೀವೋ? ಏನು ಸಾಮಾನುಗಳೋ? ಅಜ್ಜಮ್ಮಾ!

**ಮುದುಕಿ**- ಅಕ್ಕಸಾಲಿಗನ ಮನೆಗೆ ಬಂಗಾರವನ್ನು ಕೊಡುವದೇ ಬೇಡ ಅರೆವಾಸೀ ತಿಂದುಬಿಟ್ಟಾನು.

**ಬ್ರಾಹ್ಮಣ**- ಕಾರಿಸಿಬಿಡುವದಕ್ಕೆ ನೀವು ಗಟ್ಟಿಗರಿದ್ದೀರಿ.

**ಬ್ರಾಹ್ಮಣಿ**- ಅಜ್ಜಮ್ಮಾ! ಏನಮ್ಮ ಇದು?

**ಮುದುಕಿ**- ಯಾರಿದು? ವೇಣೂ? ಇನ್ನೂ ನೀನು ಪ್ರಸೇನ ಸರ್ದಾರರ ಮನೆಗೆ ಸುವರ್ಣ ದಾನವನ್ನು ತಕ್ಕೊಳ್ಳಲಿಕ್ಕೆ ಹೋಗಿಲ್ಲವೇನೆ?

**ಬ್ರಾಹ್ಮಣಿ**- ಇಲ್ಲಜ್ಜೀ! ನಿಜವಾಗಿಯೂ ಆತನು ಸುವರ್ಣ ದಾನವನ್ನು ಮಾಡುತ್ತಿರುವನೇ ?

**ಇಬ್ಬರೂ**- ಇದೋ ನೋಡಿ ಕನಿಷ್ಟ ಒಂದು ಧಡಿ ತೂಕವಾದರೂ ಸುವರ್ಣವಿರಬಹುದು. ಹೋಗಿ ನೀವೂ ತೀವ್ರ.

**ಬ್ರಾಹ್ಮಣ**- ಹಾಗಾದರೆ ನಡೆಯೆ ತೀವ್ರ ಹೋಗೋಣ. ( ಹೋಗುವರು )

( ಸತ್ರಾಜಿತನ ಮನೆ. )

**ಸತ್ರಾಜಿತ**-

ರಾಗ. ಸೋನಿ- ತಾಳ- ತ್ರಿತಾಳ.

॥ **ಪದ** ॥ ಸರಿಯಾರಿಹರೈ ಧರಣೀ ತಲದೀ ॥

ಧರೆಯಾ ಕುಬೇರನಿರುವಾಗಲಿನ್ನಾ।

ಪರ ಬಂಧುವಾಗಿ ಇರುವ ಪ್ರಸೇನನು ।
ಧರುಣೀಶರೆಲ್ಲ ಧನದಾಶೆಗಾಗಿ ।
ವರ ಗೌರವ ನೀಡಲುಬೇಕು ನಮಗೆ ॥ ೧ ॥

ಯಾರಲ್ಲಿ ?

**ಸೇವಕ**- ಬುದ್ಧಿ ನಾನು ಸೇವಕ.

**ಸತ್ರಾಜಿ**- ಇನ್ನುಮೇಲೆ ತಮ್ಮನಾದ ಪ್ರಸೇನನಿಗೆ "ಪ್ರಸೇನಮಹಾರಾಜ" ನೆಂದು ಕರೆಯಬೇಕು ಬಲ್ಲಿರೋ?

**ಸೇವಕ**- ಬಲ್ಲೆವು ಬುದ್ಧಿ.

**ಸತ್ರಾಜಿ**- ಯಾಕೆಂದರೆ ಅವನು ಶ್ಯಮಂತಕ ಮಣಿಯನ್ನು ಸಂಪಾದಿಸಿ ಕೊಂಡು ಬಂದಿದ್ದಾನೆ ಬಲ್ಲಿರೋ?

**ಸೇವಕ**- ಬಲ್ಲೆವು ಬುದ್ಧಿ.

**ಸತ್ರಾಜಿ**- ಆದ್ದರಿಂದ ಎಲ್ಲ ದಾಸ ದಾಸಿಯರು ಅವನಿಗೆ ವಿಧೇಯರಾಗಿ ವರ್ತಿಸಬೇಕು ಬಲ್ಲಿರೋ?

**ಸೇವಕ**- ಬಲ್ಲೆವು ಬುದ್ಧಿ.

**ಸತ್ರಾಜಿ**- ಯಾಕೆಂದರೆ ಈಗ್ಗೆ ಅವನು ಬ್ರಹ್ಮಾಂಡದ ಕುಬೇರನು.

**ಸೇವಕ**- ಬುದ್ಧಿ ನಾವೇನೊ ಬಹು ವಿನಯದಿಂದ ವರ್ತಿಸುವೆವು. ಆದರೆ ಅವರು ಮಾತ್ರ ತಾಳಗೆಟ್ಟು ನಡಿಯುತ್ತಿರುವರು.

**ಸತ್ರಾಜಿ**- ಯಾರು ನನ್ನ ತಮ್ಮನಾದ ಪ್ರಸೇನ ಮಹಾರಾಜನೇ!

**ಸೇವಕ**- ಅಹುದು ಬುದ್ಧಿ.

**ಸತ್ರಾಜಿ**- ಈ ಬ್ರಹ್ಮಾಂಡದ ಕುಬೇರನೇ ?

**ಸೇವಕ**- ಅಹುದು ಬುದ್ಧಿ ಅವರೇ !

**ಸತ್ರಾಜಿ**- ಚೋರಾ ( ಹೊಡೆದು ) ಅವನ ಅನ್ನವನ್ನೇ ತಿಂದು ಅವನನ್ನೇ ದೂರಿಕೊಳ್ಳುವೆಯಾ?

**ಸೇವಕ**- ತಪ್ಪಾಯಿತು ಬುದ್ಧಿ ಇನ್ನು ಮೇಲೆ ಹಾಗೆ ಹೇಳಲಿಕ್ಕಿಲ್ಲ.

**ಸತ್ರಾಜಿ**- ಎಲೋ! ದೂತನ ಕರುವೇ! ಹೀಗೆ ಬಾ.

**ಸೇವಕ**- ಬಡಿಯಬೇಡಿ ಬುದ್ಧಿ.

**ಸತ್ರಾಜಿ**- ಇಲ್ಲ ಬಾರೊ (ಬರುವನು) ಎಲೋ ಅವನಿಗೆ ಏನೆಂದು ಸಂಬೋಧಿಸಲಿಕ್ಕೆ ಹೇಳಿದೆನು?

**ಸೇವಕ**- ಪ್ರಸೇನ...........ಮಹಾರಾಜರೆಂದು.

**ಸತ್ರಾಜಿ**- ಹಾಂ ಹೀಗೆ ಹಾದಿಯ ಮೇಲೆ ಬಾ. ಅವನೆದುರಿನಲ್ಲಿ ಹೇಗೆ ನಿಲ್ಲಬೇಕು? (ಬಗ್ಗುವನು) ಇನ್ನೂ ಕೊಂಚ ಬಾಗೊ! ಕೈಕಟ್ಟಿಕೊ.

**ಸೇವಕ**- ಏತರಿಂದ ಕಟ್ಟಿಕೊಳ್ಳಲಿ ಬುದ್ಧಿ.

**ಸತ್ರಾಜಿ**- ಹುಚ್ಚ ಮುಂಡೆ! ಹಗ್ಗದಿಂದ ನಿನಗೆ ಕೈ ಕಟ್ಟಿಕೊಳ್ಳಲಿಕ್ಕೆ ಹೇಳಲಿಲ್ಲ. ಕೈ ಕಟ್ಟಿಕೊಳ್ಳುವದೆಂದರೆ ಹೀಗೆ.

**ಸೇವಕ**- (ಹಾಗೆ ಮಾಡಿ) ಬುದ್ಧಿ! ಮಿತಿಮೀರಿ ಮದ್ಯವನ್ನು ಕುಡಿದು ನಮ್ಮನ್ನು ಮನಸ್ಸಿಗೆ ಬಂದಂತೆ ಬೈಯ್ಯುವರು.

**ಸತ್ರಾಜಿ**- ಬೈಸಿಕೊಳ್ಳಬೇಕು.

**ಸೇವಕ**- ಬಡಿಯುವರು.

**ಸತ್ರಾಜಿ**- ಬಡಿಸಿಕೊಳ್ಳಬೇಕು.

**ಸೇವಕ**- ಪ್ರಸಂಗಾನುಸಾರ ಒದಿಕೆಗಳನ್ನು ಸಹ ಕೊಡುವದಲ್ಲದೆ! ಮೋರೆಯ ಮೇಲೆ ಉಗುಳಿಬಿಡುವರು.

**ಸತ್ರಾಜಿ**- ಒದಿಸಿಕೊಳ್ಳಬೇಕು. ಮತ್ತು ಮೋರೆಯ ಮೇಲೆ ಉಗುಳಿದರೆ ಮುಗುಳುನಗೆ ನಗುತ್ತ ಅದನ್ನು ಗೌರವಭಾವದಿಂದ ವರೆಸಿಕೊಳ್ಳಬೇಕು. ಎಲೋ? ಬ್ರಹ್ಮಾಂಡದ ಕುಬೇರನ ಬೈಗಳವಾಗಲಿ, ವದಕೆಗಳಾಗಲಿ ನಿಮ್ಮಂತಹ ಸಾಮಾನ್ಯ ದೂತರಿಗೆ ಲಭಿಸುವದಾದರೂ ಒಂದು ಭಾಗ್ಯವೆಂದೇ ಹೇಳಬೇಕು. ಇರಲಿ. ನೀನಿನ್ನು ನಡೆ. ಸದಾ ಅವನ ಸೇವೆಯಲ್ಲಿಯೇ ಇರಬೇಕು ತಿಳಿಯಿತೇ? (ಹೋಗುವನು)

**ನಾರದ**- ( ಪ್ರವೇಶಿಸಿ )

ರಾಗ. ಬಾಗೇಶ್ರಿ- ತಾಳ- ತ್ರಿತಾಳ.

॥ **ಪದ** ॥ ಜನಾರ್ದನ । ಜಗಜೀವನ ಪಾದ । ಜಾನಕಿ ನಾಯಕ ॥
ಚಂದ್ರವಿಜನಕ । ಜಲಜನಾಭ ಜಗದಾರ್ತಿಹ ಜಯಜಯ ।
ಜ್ಞಾನನಿಧೇ ನಿರ್ವಾಣ । ನಿಧಾನ ! ದೀನಪಾಲಕ ದೈನ್ಯವಿದೂರ !
ದಾನವಕುಲವನ ದಾವಾನಲನೇ ॥ ೧ ॥

**ಸತ್ರಾಜಿ**- ಬನ್ನಿ ಬನ್ನಿ ಸ್ವಾಮಿ ನಾರದರೇ! ( ಬಾಗದೆ ನಮಸ್ಕರಿಸುವನು )

**ನಾರದ**- ( ಪೇಲಾವರಿ ನಗೆಯಿಂದ ) ಕಲ್ಯಾಣಮಸ್ತು.

**ಸತ್ರಾಜಿ**- ಅವೆಲ್ಲವಿರಲಿ. ತಾವು ಪ್ರಸೇನ ಮಹಾರಾಜರ ಸಮಾಚಾರವನ್ನು ಕೇಳಿರಬಹುದು.

**ನಾರದ**- ಅವನಾರಯ್ಯ? "ಪ್ರಸೇನಮಹಾರಾಜನು" ?

**ಸತ್ರಾಜಿ**- ಸ್ವಾಮೀ ನನ್ನ ತಮ್ಮನು.

**ನಾರದ**- ನಿನ್ನ ತಮ್ಮನಾದ ಪ್ರಸೇನನು ಎಂದಿನಿಂದ ಮಹಾರಾಜನಾದನಯ್ಯಾ? ಯಾವ ರಾಜ್ಯವನ್ನು ಸಂಪಾದಿಸಿದನು?

**ಸತ್ರಾಜಿ**- ರಾಜ್ಯವನ್ನೇನೂ ಸಂಪಾದಿಸಿಲ್ಲ..............................

**ನಾರದ**- ಹಾಗಾದರೆ ಬಲರಾಮ ಶ್ರೀ ಕೃಷ್ಣಮಹಾರಾಜರೇನಾದರೂ ಆ ಬಹುಮಾನವನ್ನು ಕೊಟ್ಟರೇನು?

**ಸತ್ರಾಜಿ**- ಅವರೇತಕ್ಕೆ ಕೊಡಬೇಕು? ನಮ್ಮಿಷ್ಟಕ್ಕೆ ನಾವೇ ತೆಗೆದುಕೊಂಡಿದ್ದೇವೆ.

**ನಾರದ**- ಸರಿ. ಹಾಗಾದರೆ ಅದನ್ನು ನಿಮ್ಮಿಷ್ಟಕ್ಕೆ ನೀವೇ ಬಳಸಿಕೊಳ್ಳುವಿರಂತೆ ಅದಿರಲಿ ಸತ್ರಾಜಿತನೇ! ಪ್ರಸೇನನ ಸಮಾಚಾರವೇನು?

**ಸತ್ರಾಜಿ**- ಸ್ವಾಮೀ! ಮಹಾರಾಜನೆಂಬ ಉಪಪದವಿಲ್ಲದೇ ಪ್ರಸೇನನನ್ನು ಸಂಬೋಧಿಸಬೇಡಿ.

**ನಾರದ**- ಸತ್ರಾಜಿತನೇ! ಸಿರಿವಂತರಿಗೆ ಇಲ್ಲದ ಮಹತ್ವವನ್ನು ಕೊಟ್ಟು ಕರೆಯಲಿಕ್ಕೆ ನಾನೇನು ಶೋಚನೀಯ ನೀಚವೃತ್ತಿಯನ್ನು ಸ್ವೀಕರಿಸಿ

ಬಂದ ಬ್ರಾಹ್ಮಣನಲ್ಲ. ನಿನ್ನ ತಮ್ಮನಾದ ಪ್ರಸೇನನು ಪ್ರಜಾಪೀಡಕ ನಾದ ಯಾವರಾಜನನ್ನಾದರೂ ಯುದ್ಧದಲ್ಲಿ ಸೋಲಿಸಿ ಅವನ ರಾಜ್ಯವ ನ್ನು ಗೆದ್ದಿದ್ದರೆ ಹೇಳು. ಮಹಾರಾಜನೆಂದು ಸಂಬೋಧಿಸುವೆನು. ಅಥವಾ ರಾಜಾಧಿರಾಜ ಬಲಭದ್ರ ಮಹಾರಾಜರೇನಾದರೂ ಈ ಬಹುಮಾನದ ಉ ಪಾಧಿಯನ್ನು ತಗಲಿಸಿದ್ದರೆ ಹೇಳು. ಮಹಾರಾಜನೆಂದು ಸಂಬೋಧಿಸು ವೆನು. ಏನೂ ಇಲ್ಲದೆ ಮಹಾರಾಜನೆಂದು ಕರೆಯಲಿಕ್ಕೆ ಹೇಳಿದರೆ ನಾ ನೇನು ಕರೆಯತಕ್ಕವನಲ್ಲ. ಎಲೊ? ಅದರ ಬೆಲೆಯು ಅಷ್ಟು ಕಡಿಮೆ ಯಾದದ್ದಲ್ಲ ತಿಳಿಯಿತೆ.

**ಸತ್ರಾಜಿ**- ಸ್ವಾಮೀ! ಸೂರ್ಯೋಪಾಸನೆಯನ್ನು ಮಾಡಿ ವಿಪುಲ ಸುವ ರ್ಣವನ್ನು ಪ್ರಸವಿಸುವ ಸ್ಯಮಂತಕಮಣಿಯನ್ನು ಸಂಪಾದಿಸಿದ ಸಾಹ ಸಿಗೆ ಈ ಬ್ರಹ್ಮಾಂಡದ ಕುಬೇರನಾಗತಕ್ಕವನಿಗೆ ತಾವು ಮಹಾರಾಜನೆಂ ದು ಕರೆಯದಿರುವದು ಸೋಜಿಗದ ಸಮಾಚಾರವಲ್ಲವೆ?

**ನಾರದ**- ಓಹೋ ಹೋ ಹೋ. ಇಷ್ಟಕ್ಕೇನೇ ಅವನಿಗೆ ಮಹಾರಾಜನೆಂದು ಕರೆಯಬೇಕೆ?

**ಸತ್ರಾಜಿ**- ಏತಕ್ಕೆ ಕರೆಯಲಾಗದು?

**ನಾರದ**- ಅಯ್ಯಾ! ನೀನೇ ಹೇಳಿದೆಯಲ್ಲವೆ! ಬ್ರಹ್ಮಾಂಡದ ಕುಬೇ ರನೆಂದು? ಹಾಗಾದರೆ ಅವನು ಮಹಾರಾಜನು ಹೇಗಾದನು? ಬ್ರಹ್ಮಾಂ ಡಕ್ಕಾದರೂ ಕುಬೇರನೇ! ಸಿರಿವಂತನೇ! ಮಹಾರಾಜರ ಲಕ್ಷಣವು ಬಂ ಗಾರದಲ್ಲಿರುವದಿಲ್ಲ. ಅದು ಬಾಹುಗಳಲ್ಲಿರುತ್ತೆ ಬಾಹುಗಳಲ್ಲಿ. ಎಲೋ! ಯದ್ಯಪಿ ನಿನ್ನ ತಮ್ಮನಿಗೆ ಸೂರ್ಯನಾರಾಯಣನ ಅನುಗ್ರಹದಿಂದ ಆ ದಿವ್ಯ ಮಣಿರಾಜವು ಸಿಕ್ಕಿದ್ದರೂ ಅದನ್ನು ದಕ್ಕಿಸಿಕೊಳ್ಳುವಷ್ಟು ಶೌರ್ಯವು ಅವನಲ್ಲಿರುವದೆಂದು ನನ್ನ ನಂಬಿಗೆಯಿಲ್ಲ. ಪ್ರಯುಕ್ತ ನಿಮಗೆ ಹಿತವಾದ ಮಾತನ್ನೇ ಹೇಳುವೆನು. ಇಷ್ಟವಿದ್ದರೆ ಕೇಳಬಹುದು.

**ಸತ್ರಾಜಿ**- ಏನದು ಹೇಳು ನೋಡುವಾ.

**ನಾರದ-**

ಆನಂದ ಭೈರವಿ- ತ್ರಿತಾಲ.

**||ಪದ||** ಯದುನಾಥಗೆ ಮುದದಿಂದ ನೀಡೈ । ಆ ದಿವ್ಯ ಮಣಿಯಾ ವಿವಸೀ ।
ಮನದಿ । ಹಿಡಿಯದಲೆ ಶಂಕೆಗಡವಾಗಿ ನೀನು ॥ ಪಲ್ಲ ॥
ನರರೂಪವನ್ನು ಧರಿಸಿರುವನಾತ । ಶಿರಿಕಾಂತನೂ ಸಾಗರಶಾಯಿ ।
ಸೈಜ ॥ ಅ ॥ ಪ ॥
ಇತರರಿಗೆ ಸಲ್ಲದಾ । ಸನ್ನುತ ಸದ್ಗುಣ । ರತ್ನರಾಜವು ।
ಕ್ಷಿತಿಯೊಳಗೇ । ಅತುಲ ಬಲಶಾಲಿಯಾದ ಮಧುರೆಯ ।
ಕಂಸನನ್ನಳಿದ ಶ್ರೀ ಹರಿಯು ವಿನಹಾ ॥

**ಸತ್ರಾಜಿ-** ಸ್ವಾಮೀ ನಾರದ ಮಹಾಮುನಿಗಳೇ ಮೊದಲು ನಮ್ಮ ಮನೆಯಿಂದ ದಯಮಾಡಿಸಿ.

**ನಾರದ-** ಅದೇಕೆ?

**ಸತ್ರಾಜಿ-** ಒಳಿತಾದ ಬುದ್ಧಿವಾದವನ್ನು ಮಾಡುವಿರಿ. ಹನ್ನೆರಡು ವರ್ಷ ಉಗ್ರ ತಪವನ್ನಾಚರಿಸಿ ಗಳಿಸಿದ ಶ್ಯಮಂತಕ ಮಣಿಯನ್ನು ಕೃಷ್ಣರಾಜನಿಗರ್ಪಿಸುವದಕ್ಕಾಗಿ ಹೇಳುವಿರಲ್ಲಾ! ಇದು ಸರಿಯೇ. ಕೃಷ್ಣರಾಜರು ತಮ್ಮ ದ್ವಾರಕೆಯನ್ನು ದಾನ ಮಾಡೆಂದರೆ ಮಾಡುವರೇ? ಒಳ್ಳೆ ಬುದ್ಧಿವಾದವು ದಯಮಾಡಿಸಿ.

**ನಾರದ-** ನಾನೇನು ಇಲ್ಲಿ ಸ್ಥಿರವಾಗಿ ನಿಲ್ಲಲಿಕ್ಕೆ ಬಂದವನಲ್ಲ. ಇದೊ ಹೊರಟೆನು.

**ಸತ್ರಾಜಿ-** ದಯಮಾಡಿಸಿ.

**ನಾರದ-** ಇದ್ದ ಸಮಾಚಾರವನ್ನು ಹೇಳಿದೆನು. ಇದರ ಮೇಲೆ ನಿನ್ನಿಷ್ಟ.

ರಾಗ. ಖಮಾಜ- ದೀಪಚಂದಿ.

**॥ಪದ॥** ರಾಧಾಮನೋಹರ ಮಾಧವ । ಮಧುಸೂದನ ಸುರನುತ ।
ಕೇಶವಾ ॥
ಬಾಧೆಯನಳಿದು ಸನ್ಮೋದವನಿತ್ತು । ಕಾಪಾಡುವಿ ಸಜ್ಜನ ।
ವೃಂದವಾ ॥ ೧ ॥ (ಹೋಗುವನು)

**ಸತ್ರಾಜಿ-** ಹರಿಯಂತೆ, ಆದಿನಾರಾಯಣನ ಅವತಾರಿಯಂತೆ ಹೊಗಳುವದಕ್ಕೇನಾದರೂ ಮೇರೆಯೇ? ನಾನೇನರಿಯದ ಕೃಷ್ಣರಾಜನೇ! ಎಲೋ

ಯಾವ ದಿಕ್ಕಿನಿಂದಲೋ? ಸ್ವಲ್ಪ ಹಣೆಬರಹವು ಸರಳವಾಗಿಬಿಟ್ಟಿದೆ. ಅಷ್ಟಕ್ಕೇನೇ ಆತನು ದೇವಾದಿ ದೇವನಂತೆ ಅವತಾರಿಯಂತೆ. ಹೀಗೆ ಒಂದೇಸವನೆ ಕೊಂಡಾಟವೇ ಕೊಂಡಾಟ? ಮತ್ತು ಮೇಲೆ ಇಂಥ ಒಬ್ಬರ ಮನೆಯನ್ನು ಹಾಳು ಮಾಡಲಪೇಕ್ಷಿಸುವವರು ದೊಡ್ಡ ಮನುಷ್ಯರಂತೆ ದೊಡ್ಡ ಮನುಷ್ಯರು. ( ಪ್ರಸೇನನನ್ನು ನೋಡಿ ) ಕೇಳಿದೆಯಾ? ಪ್ರಸೇನ! ನಾರದರ ಹೇಳಿಕೆಯನ್ನು ನೀನಿದ್ದಿಲ್ಲವಂತೆ ಒಳಿತಾಯಿತು. ಇದ್ದಿದ್ದರೆ ಉತ್ಪಾತವನ್ನೇ ಮಾಡುತ್ತಿದ್ದೆ.

**ಪ್ರಸೇನ**– ( ಅಮಲೇರಿದವನಂತೆ ) ಆ ಕೊಳ್ಳಿಕೊಡಗ ನಾರದನು ಏನು ಹೇಳಿದನೋ?

**ಸತ್ರಾಜಿ**– ನೀನು ಪರಮ ಪ್ರಯಾಸದಿಂದ ಪಡೆದ ಆ ದಿವ್ಯ ಮಣಿಯನ್ನು ಕೃಷ್ಣರಾಜನಿಗರ್ಪಿಸಬೇಕಂತೆ.

**ಪ್ರಸೇನ**– ಹಾಗೆ ಹೇಳುವ ಆ ನಾರದನನ್ನು ನನ್ನ ಹತ್ತಿರವೇಕೆ ಎಳೆದು ತರಲಿಲ್ಲ.

॥ ಝಂಪಾ ॥

॥**ಪದ**॥ ಮದ್ಯವಂ ಕುಡಿಸಿ ಕುಲಗೆಡಿಸಿ ಬಿಡುತಿದ್ದೆನಾ ।
ಬುದ್ಧಿ ಹೇಳಲು ಬಂದ ಆ ನಾರದನಿಗೆ ।
ತಿದ್ದಿ ನಾಮವನಿಟ್ಟು ಕಣಿಗೆ ರಕ್ತವ ತಿಕ್ಕಿ ।
ಗುದ್ದಿ ಕುರಿಮಾಂಸವನು ತಿನಿಸುತ್ತಲಿದ್ದೆ ॥ ೧ ॥

**ಸತ್ರಾಜಿ**– ಹೋಗಲಿ ಬಿಡು. ಅವನು ಹೋಗಿಬಿಟ್ಟನಲ್ಲವೇ?

**ಪ್ರಸೇನ**– ಒಳಿತಾಗಿ ಉಳಿದುಕೊಂಡನು. ಅವನ ಹಣೆಬರಹವು ಚನ್ನಾಗಿದೆ.

**ಸತ್ರಾಜಿ**– ತಮ್ಮನೇ ಯದ್ಯಪಿ ನಿನಗೆ ಆ ಮಣಿರಾಜವು ಸಿಕ್ಕಿದ್ದರೂ ಅದನ್ನು ದಕ್ಕಿಸಿಕೊಳ್ಳುವಷ್ಟು ತ್ರಾಣವು ನಿನ್ನ ಬಾಹುಗಳಲ್ಲಿದ್ದಿಲ್ಲವಂತೆ.

**ಪ್ರಸೇನ**– ಹೀಗೆ ಆ ನಾರದನು ಹೇಳಿದನೇ! ಆ ತಿರುಕ ನಾರದನು ಹೀಗೆ ಹೇಳಿದನೇ? ಈಗಲೇ ಅವನನ್ನು ಚನ್ನಾಗಿ ಮೆತ್ತಗೆ ಮಾಡಿ ನನ್ನ ಬಾಹುಗಳ ಬಲವನ್ನು ತೋರಿಸಿಯೇ ಬಿಡುವೆನು.

**ಸತ್ರಾಜಿ**– ಬಿಡು ತಮ್ಮನೇ ಹೋಗಲಿ ಬಿಡು.

**ಪ್ರಸೇನ**- ಇಲ್ಲ. ಯಾವ ಕಾಲಕ್ಕೂ ಬಿಡುವದಿಲ್ಲ. ಪ್ರಮಾಣಪೂರ್ವಕವಾಗಿಯೂ ಬಿಡುವದಿಲ್ಲ. ಆ ನಾರವನಿಗೆ ನನ್ನ ಬಾಹುಗಳ ಬಲವನ್ನು ತೋರಿಸಿಯೇ ಬಿಡುವೆನು.

**ಸತ್ರಾಜಿ**- ಬೇಡ ಬಿಡು ತಮ್ಮನೇ ಅವನು ಹಾಗೆಂದ ಮಾತ್ರಕ್ಕೆ ನೀನು ಹಾಗಾಗಬಲ್ಲೆಯಾ? ಹೋಗಲಿ ಬಿಡು. ಬಡಪ್ರಾಣಿಯು ಎಲ್ಲಿಯಾದರೂ ಬದುಕಿಕೊಳ್ಳಲಿ.

**ಪ್ರಸೇನ**- ನನ್ನ ಬಾಹುಗಳಲ್ಲಿ ಬಲವಿಲ್ಲವೇ ಅಣ್ಣಾ! ನನ್ನ ಬಾಹುಗಳಲ್ಲಿ ಬಲವಿಲ್ಲವೇ? ಎಲೋ? ಏ ಬ್ರಾಹ್ಮಣ ದಂಪತಿಗಳೇ! ನನ್ನ ಬಾಹುಗಳಲ್ಲಿ ಬಲವಿಲ್ಲವೇ? ಒಬ್ಬೊಬ್ಬರನ್ನು ಒಂದೊಂದಾಗಿ ಗುದ್ದಿ ಪ್ರಾಣ ತೆಗೆದುಕೊಂಡು ಬಿಟ್ಟೇನು. ( ಹೊಡೆಯಲಿಕ್ಕೆ ಹೋಗುವನು )

**ಬ್ರಾಹ್ಮಣಿ**- ( ಹೆದರಿ ) ಮಹಾರಾಜ! ತಮ್ಮ ಬಾಹುಗಳಲ್ಲಿ ಬಲವಿಲ್ಲವೆಂದು ಹೇಳುವವರಾರು? ಈ ಅಗಲವಾದ ಎದೆಯೂ, ಧಷ್ಟಪುಷ್ಟವಾದ ಬಾಹುಗಳೂ, ಈ ಭೀಕರ ಮುದ್ರೆಯೂ ಯಾರನ್ನು ತಾನೇ ಭಯಗೊಳಿಸಲಾರದು?

**ಬ್ರಾಹ್ಮಣ**- ಮಹಾರಾಜ! ತಮ್ಮ ಬಾಹುಬಲಗಳ ಸಂಗಿಯೊತ್ತಟ್ಟಿಗಿರಲಿ. ಈಗಿನ ತಮ್ಮ ಬಾಯಿಬಲವನ್ನು ಕೇಳಿಯೇ ನಾವು ಭಯಭ್ರಾಂತರಾಗಿದ್ದೇವೆ.

**ಪ್ರಸೇನ**- ಎಲೋ ವಿಪ್ರ ದಂಪತಿಗಳೇ! ನನಗಿನ್ನೂ ನಿಜವಾದ ರೋಷವು ಬಂದಿಲ್ಲವೆಂದು ನೀವೆಲ್ಲರೂ ಹೀಗೆ ನನ್ನ ಮುಂಗೆ ನಿಂತುಕೊಂಡು ಮಾತುಗಳನ್ನಾಡುತ್ತಿರುವಿರಿ. ನಿಜವಾದ ರೋಷವು ಬಂದುಬಿಟ್ಟರೆ? ಉಂ.

**ಬ್ರಾಹ್ಮಣ**- ಬೇಡಿ. ಬೇಡಿ. ನಿಜವಾದ ರೋಷವನ್ನು ತಾಳಬೇಡಿ. ನಿಂತ ನಿಂತಲ್ಲಿಯೇ ನಮ್ಮ ಪ್ರಾಣಗಳು ಹೋಗಿಬಿಟ್ಟಾವು.

**ಸತ್ರಾಜಿ**- ತಮ್ಮನೇ ತಾಳು ತಾಳು.

**ಪ್ರಸೇನ**- ಉಂ. ( ಎಂದು ಹತ್ತಿ ಬ್ರಾಹ್ಮಣರ ಮೇಲೆ ಹೋಗುವನು ) ತೋರಿಸಲೋ ನನ್ನ ಪರಾಕ್ರಮವನ್ನು ?



**ಪ್ರಸೇನ**:- ನನಗಿನ್ನೂ ನಿಜವಾದ ರೋಷವು ಬಂದಿಲ್ಲ. ನಿಜವಾದ ರೋಷವು ಬಂದುಬಿಟ್ಟಿದ್ದರೇ, ಉಂ.

**ಬ್ರಾಹ್ಮಣ**- ಬೇಡಿ. ಬೇಡಿ. ಮಹಾರಾಜರೇ ನಾವು ಬಡವರು.

**ಪ್ರಸೇನ**- ಈಗ್ಗೆ ನನ್ನ ಬಾಹುಗಳ ಬಲವು ಗೊತ್ತಾಯಿತೋ?

**ಬ್ರಾಹ್ಮಣ**- ಗೊತ್ತಾಯಿತು ಮಹಾರಾಜಾ ತಾವು ಅಗಾಧ ಬಲಶಾಲಿಗಳು.

**ಬ್ರಾಹ್ಮಣ**- ಕೇವಲ ರಣ ಶೂರರು.

**ಪ್ರಸೇನ**- ಹೇಳಿ ಹಾಗೇ ಹೇಳುತ್ತ ಹೋಗಿ.

**ಬ್ರಾಹ್ಮಣ**- ಅರಿಗಜ ಕಂಠೀರವರು.

**ಪ್ರಸೇನ**- ಮತ್ತೂ ಹೇಳಿ.

**ಬ್ರಾಹ್ಮಣ**- ಅರಿತಿಮಿರ ಮಾರ್ತಾಂಡರು.

**ಪ್ರಸೇನ**- ಇನ್ನೂ ಹೇಳಿ. ಹೆ. ಹೆ. ಹೆ. ಅಣ್ಣಾನೇ ಇವರು ಕೇಳಿದಷ್ಟು ಸುವರ್ಣವನ್ನು ಕೊಡು.

**ಬ್ರಾಹ್ಮಣ**- ( ಹೇರಾಳವಾಗಿ ನಗುತ್ತ ) ಆಹಹ ಏನು ಪ್ರಸೇನ ಮಹಾರಾಜರ ಔದಾರ್ಯ?

**ಪ್ರಸೇನ**- ಅಣ್ಣಾನೇ ಇವರ ಮನೆಗೆ ಹೊರಿಸಿ ಕಳಿಸು.

**ಬ್ರಾಹ್ಮಣ**- ಪ್ರಸೇನಮಹಾರಾಜರೇ! ತಮ್ಮಂತಹ ದಾನಶೂರರು ಈ ಪೃಥ್ವಿಯಲ್ಲಿ ಹಿಂದೆ ಹುಟ್ಟಲಿಲ್ಲ. ಮುಂದಾದರೂ ಹುಟ್ಟಲಿಕ್ಕಿಲ್ಲ.

**ಪ್ರಸೇನ**- ಅಣ್ಣಾನೇ! ಇವರಿಗೆ ನಾಲ್ಕು ಜನರ ಮೇಲೆ ಹೊರಿಸಿಕಳಿಸು.

**ಸತ್ರಾಜಿ**- ಹಾಗೇ ಆಗಲಿ ನಡೆಯಿರಿ.

**ಬ್ರಾಹ್ಮಣ**- ( ಹೇರಾಳವಾಗಿ ನಗುತ್ತ ಹೊರಡುವನು )

**ಪ್ರಸೇನ**- ಎಲೋ ಬ್ರಾಹ್ಮಣಾ! ಹೀಗೆ ಬಾ.

**ಬ್ರಾಹ್ಮಣ**- ಮತ್ತೇನು ಮಹಾರಾಜ?

**ಪ್ರಸೇನ**- ನೀವು ಈ ಸುವರ್ಣ ದಾನವನ್ನು ತೆಗೆದುಕೊಂಡು ಹೋಗುವ ಕಾಲಕ್ಕೆ ದಾರಿಯಲ್ಲಿ ಯಾರಾದರೂ ಇದನ್ಯಾರು ಕೊಟ್ಟರೆಂದು ಕೇಳಿದರೆ ಏನು ಹೇಳುವಿರಿ?

**ಬ್ರಾಹ್ಮಣ**- ಈ ಬ್ರಹ್ಮಾಂಡದ ಕುಬೇರರಾದ ಪ್ರಸೇನಮಹಾರಾಜರು ಕೊಟ್ಟರೆಂದು ಖಂಡಿತವಾಗಿ ಹೇಳಿಬಿಡುವೆವು.

**ಪ್ರಸೇನ**- ಭಲಾ. ಭಲಾ. ಚನ್ನಾಗಿ ಹೇಳಿದಿರಿ. ಹೋಗಿ. ಹೋಗಿ. ಕಂಡ ಕಂಡವರ ಮುಂದೆ ಹೇಳುತ್ತಾ ಹೋಗಿ. ಮನೆ ಮನೆಗಳಿಗೆ ಹೇಳುತ್ತಾ ಹೋಗಿ.

**ಬ್ರಾಹ್ಮಣ**- ಅದೇಕೆ ?

**ಪ್ರಸೇನ**- ಏಕೆಂದರೆ? ನಮ್ಮ ಕೀರ್ತಿಯು ಸರ್ವಶ್ರುತವಾಗಬೇಕು.

**ಬ್ರಾಹ್ಮಣ**- ಈಗಾಗಲೆ ಆಗುವಷ್ಟು ಆಗಿಹೋಗಿದೆ ಮಹಾರಾಜ.

**ಪ್ರಸೇನ**- ಇನ್ನೂ ಆಗಬೇಕು ಹೋಗೋ ಮುಮ್ಮಗನೇ ? ( ಹೋಗುವನು ) ಇನ್ನು ಮೇಲೆ ನಾವು ನಮ್ಮ ಬಾಹುಬಲವನ್ನು ಹೆಚ್ಚುಮಾಡಿಕೊಳ್ಳುವದಕ್ಕಾಗಿ ನಿತ್ಯದಲ್ಲೂ ಬೇಟೆಯಾಡಲಿಕ್ಕೆ ಹೋಗತಕ್ಕವರು.

ಶಂಕರ- ಝಂಪ್ ತಾಲ.

॥**ಪದ**॥ ಕುಡಿವೆ ಮಲ ಜಿಂಕೆಗಳ | ಬಿಸಿ ಬಿಸಿಯು ರಕ್ತಗಳ |
ಕೆಡವಿ ಶರದಿಂಪೊಡೆದು | ಕಾನನದಿ ಸತತ ॥
ಬಿಷದ ಸಂಹರಿಸುವೆನು । ಅಂಚೆಕೊಂಚಗಳನ್ನು ।
ಸಡಗರದಿ ಸೇವಿಸಲು ಪಾಕಮಾಡಿ ॥ ೧ ॥

ಪ್ರವೇಶ ಮಧುಕರ. ೧ ನೇ ಸರ್ದಾರ. ನರ್ತಕಿ.

**ಮಧುಕರ**- ಮಿತ್ರನೇ ನಮ್ಮ ಪ್ರಸೇನಮಹಾರಾಜನ ಪ್ರತಾಪವು ಹೇಗಿರುವದು. ಸಾಹಸಿಯಾದವನು ಈ ಭೂಮಂಡಲದ ಕುಬೇರನಾಗಿಬಿಟ್ಟನು

**೧ನೇ ಸರ್ದಾರ**- ಬರೀ ಕುಬೇರನೇ ಏಕೆ ? ಮಹಾರಾಜನಾಗಿಬಿಟ್ಟನೆಂದು ಹೇಳಬಾರದೇ ? ( ಹಿಂದೆ ಮುಂದೆ ನೋಡಿ ) ಬರಬರುತ್ತಾ ನಮ್ಮ ದ್ವಾರಕಾಧೀಶನಾಗಿ ಬಿಡುತ್ತಾನೆ. ನೋಡುತ್ತಾ ಹೋಗು.

**ಮಧುಕರ**- ಹಾಗಾದರೇನೇ ! ಈ ಕೃಷ್ಣ ಬಲರಾಮರ ಟೇಂಕಾರವು ಕಡಿಮೆಯಾಗಬಹುದು.

**೧ನೇ ಸರ್ದಾರ**- ಯಲೋ ಬಲಭದ್ರ ಮಹಾರಾಜರ ಸಮಾಚಾರವನ್ನು ಬಿಡು. ಅವರು ಹೇಗಾದರೂ ನಮ್ಮ ಗುಂಪಿನಲ್ಲಿ ಕಲಿತುಕೊಳ್ಳುತ್ತಾರೆ. ಆದರೆ ಆ ಕೃಷ್ಣನ ಉರವಣಿಗೆಯು ಬಹು ಹೆಚ್ಚಾಗಿ ಬಿಟ್ಟಿದೆ. ಮದ್ಯಪ್ರಾಶನ ಮಾಡತಕ್ಕವರನ್ನು ದಂಡಿಸುವ ವಿಚಾರದಲ್ಲಿರುವನಂತೆ.

**ಮಧುಕರ**- ಹಾಗೆ ಮಾಡಿದರೆ ನಾಳೆಗೆ ರಾಜ್ಯ ಕಳೆದುಕೊಳ್ಳತಕ್ಕವನು ಇಂದೇ ಕಳೆದುಕೊಂಡು ಹೋದಾನು. ಎಲೋ! ವ್ಯಕ್ತಿಸ್ವಾತಂತ್ರ್ಯವನ್ನು ಕಸೆದುಕೊಳ್ಳಬೇಕಾದರೆ ಕೃಷ್ಣರಾಜರೇಕೆ? ಅವರಾಜಿಯವರು ಸ್ವರ್ಗದಿಂದಿಳಿದು ಬಂದರೂ ಸಾಧ್ಯವಿಲ್ಲ.

**ನರ್ತಕಿ**- ಮಹಾರಾಜರೇ! ತಾವೆಲ್ಲರೂ ಬಲವಂತರು. ಅವರು ಮಾಡುವ ಒತ್ತಾಯದ ನಿಯಮವನ್ನುಲ್ಲಂಘಿಸಿ ಬಿಡುವಿರಿ. ಆದರೆ ದುರ್ಬಲ ವೇಶ್ಯೆಯರಾದ ನಮ್ಮ ಗೋಳನ್ನು ಕೇಳುವವರೇ ದಿಕ್ಕಿಲ್ಲದಂತಾಗಿದೆ.

**ಇಬ್ಬರೂ**- ನಿಮ್ಮ ವಿಷಯದಲ್ಲಿ ಏನಪ್ಪಣೆ ಹೊರಟಿದೆ?

**ನರ್ತಕಿ**- ನಾವು ಈ ವೇಶ್ಯಾವೃತ್ತಿಯನ್ನು ಬಿಟ್ಟು ಲಗ್ನ ಮಾಡಿಕೊಳ್ಳಬೇಕಂತೆ. ಇನ್ನು ರಾಜಾಜ್ಞೆಯಿಲ್ಲದೇ ಬಾಲಕಿಯರನ್ನು ಹೊಸದಾಗಿ ವೇಶ್ಯೆಯನ್ನಾಗಿ ಮಾಡಬಾರದಂತೆ. ಇದನ್ನು ಮೀರಿ ನಡೆದರೆ ಉಗ್ರಶಾಸನಕ್ಕೆ ಗುರಿಯಾಗಬೇಕಾದೀತಂತೆ.

**ಎಲ್ಲರು**- ಕೇವಲ ಹುಚ್ಚುತನ. ತಲೆ ಸಮವಿಲ್ಲದಾಗ ಕೊಟ್ಟ ಆಜ್ಞೆಯಿದು.

(ಪ್ರಸೇನನು ಬರುವನು ಎಲ್ಲರೂ ಎದ್ದು, ಪ್ರಸೇನ ಮಹಾರಾಜರಿಗೆ ಜಯವಾಗಲಿ! ಎನ್ನುವರು)

**ಪ್ರಸೇನ**- (ಕುಳಿತುಕೊಳ್ಳುತ್ತ) ಮಿತ್ರರೇ ಕುಳಿತುಕೊಳ್ಳಿ. ನಿಮ್ಮೆಲ್ಲರಿಗೂ ಮನದಣಿಯುವಷ್ಟು ಬಂಗಾರವು ಸಿಕ್ಕುತ್ತಿರುವದೇ?

**೧ನೇ ಸರ್ದಾರ**- ಈಗಿನ ಮಟ್ಟಿಗೆ ಸಾಕಾಗುವಷ್ಟು ಸಿಕ್ಕಿದೆ.

**ಪ್ರಸೇನ**- ಇನ್ನುಮೇಲೆ ಹೀಗೆ ಮಾಡಿ ಮಣಿರಾಜವು ಬಂಗಾರವನ್ನು ಕೊಟ್ಟ ತತ್ಕ್ಷಣವೇ ಸಕಲರೂ ಹಂಚಿಕೊಂಡು ಬಿಡಿ. ಉಳಿದರೆ ಬ್ರಾಹ್ಮ

ಣರಿಗೆ ದಾನ ಇಲ್ಲದಿದ್ದರೆ ಊಂಹು. ಇಲ್ಲವೇ ಇಲ್ಲ. ಆಗಲಿ ಎಲೇ ವಿಲಾಸಿನಿ! ಸ್ವಲ್ಪ ನರ್ತನವನ್ನು ಮಾಡೆ. (ನರ್ತಿಸುವಳು) ಎಲೋ ಸ್ವಲ್ಪ ಮದ್ಯವನ್ನು ಕುಡಿಸಿರೊ. ಎಲೇ ವಿಲಾಸಿನಿ ನೀನೂ ದಣಿದಿರುವಿ. ಕೊಂಚ ಮದ್ಯವನ್ನು ಕುಡಿ. ಮಿತ್ರರೇ, ನಾವು ಇನ್ನು ಮೇಲೆ ನಮ್ಮ ಭುಜಬಲವನ್ನು ಬೆಳೆಯಿಸಿಕೊಳ್ಳುವದಕ್ಕಾಗಿ ನಿತ್ಯದಲ್ಲೂ ಬೇಟೆಯನ್ನಾಡಲಿಕ್ಕೆ ಹೋಗಬೇಕು. ಮಣಿಯ ಸಲುವಾಗಿ ಹನ್ನೆರಡು ವರ್ಷಗಳನ್ನು ತಪಸ್ಸಿನಲ್ಲಿ ಕಳೆದಿದ್ದೇವೆ. ಪ್ರಯುಕ್ತ ನಮ್ಮ ಶಸ್ತ್ರಾಸ್ತ್ರ ವಿದ್ಯೆಯಾದರೂ ಕೊಂಚ ಮಲಿನವಾಗಿರಬಹುದು. ಪುನಃ ಅದರ ರೂಢಿಯನ್ನು ಚನ್ನಾಗಿ ಮಾಡಿಕೊಳ್ಳುವಾ!

೧ನೇ ಸರ್ದಾರ- ಛೇ. ಛೇ. ಅಷ್ಟೇನು ಮಲಿನವಾಗಿರಲಿಕ್ಕಿಲ್ಲ. ಯಾಕೆಂದರೆ, ಎಲ್ಲ ಯಾದವರಿಗಿಂತಲೂ ತಮ್ಮ ಶಸ್ತ್ರಾಸ್ತ್ರ ಪ್ರಯೋಗ ಕೌಶಲ್ಯವು ಶ್ಲಾಘನೀಯವಾಗಿತ್ತು.

ಪ್ರಸೇನ- ಹಾಗಾದರೆ ಎಲೋ ಒಂದು ಖಡ್ಗವನ್ನು ತನ್ನಿ. ತಿರಿವಿ ನೋಡೋಣ. (ತಂದು ಕೊಡುವರು) ಮಿತ್ರರೇ ಜೋಕೆ ಜೋಕೆ. (ಎನ್ನುತ್ತ ತಿರುವಿ ಬೀಳುವನು.)

ಮಧುಕರ- ಅಯ್ಯೋ ಆಯ್ಯೋ! ಪ್ರಸೇನ ಮಹಾರಾಜರು ಬಿದ್ದುಬಿಟ್ಟರು.

೧ನೇ ಸರ್ದಾರ- ಎಲೋ, ಹಾಗನ್ನಲಾಗದು. ಅದು ಪ್ರಸೇನ ಮಹಾರಾಜರ ಗೌರವಕ್ಕೆ ಕುಂದಕವಲ್ಲವೇ? ಮಹಾರಾಜರು ಮಲಗಿಕೊಂಡು ಸಹ ಖಡ್ಗವನ್ನು ತಿರಿಗಿಸುವರೆಂದು ಹೇಳು.

ಪ್ರಸೇನ- ಭಲಾ. ಭಲಾ. ನಿಜವಾದ ಸಂಗತಿಯನ್ನೇ ಹೇಳಿದಿ. ಇಂದು ಮಣಿಯಿಂದ ಸಿಗತಕ್ಕ ಬಂಗಾರವೆಲ್ಲ ನಿನ್ನದೇ. ಎಲೋ ಸ್ವಲ್ಪ ಮದ್ಯವನ್ನು ತನ್ನಿರೊ. ಕಾವು ಕಡಿಮೆಯಾಯಿತು. (ಕುಡಿಸುವರು ನಂತರ ಏಳುತ್ತ)

॥ ಚಾಲ್ ॥ ಸೊಳತಕಚ ॥ ದಾದರಾ ॥

॥ ೫೮ ॥ ಧರಣಿಯೊಳಾರಿನಗೆ ಸಮರು । ಭೋಗಭಾಗ್ಯದಲ್ಲಿ ವರರು ।
ಸುರರಾಜನ ತೆರದಿ ನಾನು । ಮೆರೆಯುವೆನಾನಂದದಿಂದ ॥

ಸುರಪತಿ ಅವ್ಯೃತವ ಕುಡಿದ।
ನರಪತಿ ನಾ ಸುರೆಯು ಕುಡಿವೆ।
ಸುರವಾರಾಂಗನೆಯುರಲ್ಲಿ। ನರವೇಶ್ಯೆಯರಿಲ್ಲಿರುವರು ॥

**ಎಲ್ಲರೂ**– ನಿಜವಾದ ಸಂಗತಿಯು ಹೆ. ಹೆ. ಹೆ.

**ಪ್ರಸೇನ**– ಮಿತ್ರರೇ ನೀವೆಲ್ಲರೂ ಹೋಗಿರಿ. ಈ ವಿಲಾಸಿನಿಯೊಬ್ಬಳಿರಲಿ.

(ಹೋಗುವರು)

ಪ್ರವೇಶ ॥ ಸತ್ರಾಜಿತ ॥

**ಸತ್ರಾಜಿ**– ರಾಗ—ಅಡಾಣ. ತಾಲ—ಏಕ್ಕ ॥

॥**ಪದ**॥ ನಗರೊಳ್ ನೋದವ ಪಡೆವವರೇ ವಿರಳರೂ। ಪರರ।
ಭಾಗ್ಯವನು। ನೋಡಿ॥ ಉರಿವರೆ ಮನದಲ್ಲಿ ಮತ್ಸರ।
ದಿಂ ಬಹುಜನರು। ಇಂತಹ ದುರ್ಭಾಗ್ಯರೇ, ಮಾನವರಕ್ಕಸರು।
ತೋರಿಸಿಕೊಳ್ಳುವರವರು। ಪರಮಾಪ್ತರ ತೆರದೆ। ಶಿರಿವಾನಗೆ।
ಮನದಿ ಘೋರವೈರವ ನೆನೆಯುವರು ॥

ಆ ನಾರದನಿಗೇನು ಬೇಕಾಗಿತ್ತು? ಮತ್ತು ಆ ಅಕ್ರೂರ ಉದ್ಧವಾದಿಗಳಿಗಾದರೂ ಏತಕ್ಕೆ ಬೇಕಾಗಿತ್ತು? ಸಕಲರೂ ಸಂಭಾವಿತರೇ ಆಗಿ ಬಿಟ್ಟಿದ್ದಾರೆ. ಜಗದಲ್ಲಿ ಕೃಷ್ಣರಾಜರೊಬ್ಬರ ವಿನಃ ಬೇರೆ ಯಾರೂ ಭಾಗ್ಯಶಾಲಿಗಳಾಗಲೇಬಾರದೇನು? ಯಾರು ಹೇಳಿದರೂ "ಅಯ್ಯಾ ಸತ್ರಾಜಿತನೆ! ಆ ಶಮಂತಕಮಣಿಯನ್ನು ಕೃಷ್ಣರಾಜನಿಗರ್ಪಿಸಿ ಬಿಡಬಾರದೇ? ಅದು ಆತನಿಗೇನೇ ಸಲ್ಲತಕ್ಕದ್ದು" ಹೀಗ್ಹಾಗೆ ಎಂದು ನಿತ್ಯಶಃ ಹೇಳುತ್ತಲಿದ್ದಾರೆ. ಇವರಿಗೇನನ್ನ ಬೇಕು? ಇದೇನು ಹೇಳುವಿಕೆಯು? ಜಗದಲ್ಲಿ ಸಂಭಾವಿತರಾದವರೆಲ್ಲರೂ ಹೀಗೆಯೇ ಹೇಳುವರೇನು? ಮಣಿಯು ಸಕಲರ ಕಣ್ಣುಗಳಿಗೂ ಚುಚ್ಚುತ್ತಲಿದೆ. (ಸತ್ಯಭಾಮೆಯು ಬರುವಳು) ಏನು ಮಗೂ! ಸತ್ಯಭಾಮಾ ನಿನ್ನ ಚಿಕ್ಕಪ್ಪನ ಫಲಾಹಾರವು ನಡೆಯುತ್ತಿರುವದೇ?

**ಸತ್ಯಭಾಮೆ**– ಅಹುದು ನಡೆಯುತ್ತಿರುವದು.

**ಸತ್ರಾಜಿ**– ನೀನವನ ಹತ್ತಿರವೇ ಇರಬಹುದಾಗಿತ್ತಲ್ಲವೇ?

**ಸತ್ಯಭಾಮೆ**– ತಾತಾ! ಅಲ್ಲಿರುವದು ನನಗೆ ಸಹನವಾಗಲಿಲ್ಲ.

**ಸತ್ರಾಜಿ**– ಹಾಗಾಗುವ ಕಾರಣವೇನು?

**ಸತ್ಯಭಾಮೆ**– ರಾ. ದೇಶ. ದೀಪಚಂದಿ.

॥**ಪದ**॥ ಏನೆಂದುಪೇಳಲಿ। ಮಾನವಿಲ್ಲದ ಚಿಕ್ಕ ತಾತನ।
ಹೀನ ನಡತೆಗಳನ್ನು ನೋಡಿ। ಯನ್ನ ಗತಿ ಹೇಸಿಗೆಯು।
ಬಂದುದು॥

**ಸತ್ರಾಜಿ**– ಛಿ. ಛಿ. ಮಗು ಅವನ ವಿಷಯದಲ್ಲಿ ನಾವಿಷ್ಟು ಕಠೋರ ನುಡಿಗಳನ್ನಾಡಬಾರದು.

**ಸತ್ಯಭಾಮೆ**– ಸದರ

॥**ಪದ**॥ ಅರುವಿಲ್ಲದವನಾಗಿ। ಸುರೆಯನತಿಶಯ ಪಾನ ಮಾಡಿ।
ದುರುಳ ವೇಶ್ಯೆಯಳೋರ್ವಳನು ಬಳಿಗಿರಿಸಿಕೊಂಡಿಹ।
ಲಜ್ಜೆದೊರೆದೂ॥ ಏನೆಂದು ಪೇಳಲಿ॥

**ಸತ್ರಾಜಿ**– ಬಿಡಮ್ಮಾ ಬಿಡು, ಬೇಡ ಅವನ ಸುದ್ದಿಯನ್ನೀ ತೆಗೆಯಬೇಡ.

**ಸತ್ಯಭಾಮೆ**– ಸದರ

॥**ಪದ**॥ ಧರಿಸಿದಾ ವಸ್ತ್ರಗಳ ಪರವೆಯು। ಇರದೆ ಕುಣಿದಾಡುವನು।
ಭೂತದ। ತೆರದೆ ಆ ಕುಲಟೆಯೊಳ ಕರವಾ।
ಧರಿಸಿ ಮನೆಯೋಳ್ ತರವಿದೇನ್ನೈ॥ ಏನೆಂದು॥

**ಸತ್ರಾಜಿ**– ಅಮ್ಮಾ ನೀನು ಬಹು ಮುಂಗೋಪಿಯು ಅವನೇನಾದರೂ ಮಾಡಿಕೊಳ್ಳಲಿ. ನೀನತ್ತ ಚಿತ್ತವನ್ನೀಯಲೇಬೇಡ. ನೋಡು ಅವನೇನು ಸಾಮಾನ್ಯನೇ? ಶ್ಯಮಂತಕ ಮಣಿಯನ್ನು ಸಂಪಾದಿಸಿಕೊಂಡು ಬ್ರಹ್ಮಾಂಡದ ಕುಬೇರನಾಗಿರುವನಲ್ಲವೇ?

**ಸತ್ಯಭಾಮೆ**– ನೀತಿಬಾಹಿರನಾದವನು ಕುಬೇರನಾದರೇನು? ಏನಾದರೇನು ವ್ಯರ್ಥವೇ!

**ಸತ್ರಾಜಿ**– ಮಗು ನಾವವನಲ್ಲಿರುವ ದುರ್ಗುಣಗಳನ್ನೇತಕ್ಕೆ ಗ್ರಹಣ ಮಾಡಬೇಕು? ಗುಣಾಂಶವೇನದೆಯೋ ಅದನ್ನಷ್ಟು ಗ್ರಹಣ ಮಾಡಿದರೆ ತೀರಿತು.

**ಸತ್ಯಭಾಮೆ**- ತಾತಾ! ಆತನಲ್ಲಿ ಗುಣಾಂಶವಿದ್ದರಲ್ಲವೇ! ಗ್ರಹಣ ಮಾಡುವದು? ನಾನಂತೂ ಖಂಡಿತವಾಗಿ ತಿಳಿದುಕೊಂಡಿದ್ದೇನೆ. ಕೇವಲ ಧನಾಂಶ ಗ್ರಹಣ ಮಾಡುವದಕ್ಕಾಗಿಯೇ ನೀನವನಿಗೆ ಮನೆಯಲ್ಲಿ ಭೂತಾಟಿಕೆಯನ್ನಾಡಲಿಕ್ಕೆ ಅವಕಾಶವನ್ನು ಕೊಟ್ಟಿರುವಿರಿ. ಇದೇನು ಸರಿಯಲ್ಲ. ವೈಭವಕ್ಕಾಗಿ ಮನೆಯನ್ನೇ ಮದಿರಾಮಂದಿರವನ್ನಾಗಿ ಮಾಡುವದು ನಮ್ಮ ಶೀಲವೇ ?

**ಸತ್ರಾಜಿ**- ಬಿಡು ತಾಯೀ ಅಷ್ಟಕ್ಕೇ ನಿಲ್ಲಿಸಿ ಬಿಡು. ಅದೋ ಅವನೇ ಬಂದನು.

**ಸತ್ಯಭಾಮೆ** - ಹೀಗೆ ಅತ್ಯಾಚಾರವನ್ನು ನಡೆಸುವದು ತರವೇ ಎಂದು ಅವನನ್ನೇ ಕೇಳಿಬಿಡುವೆನು.

**ಸತ್ರಾಜಿ**- ತಾಯೀ ಸುಮ್ಮನಿರು ಅಥವಾ ನೀನು ಒಳಗೆ ನಡೆ.

**ಸತ್ಯಭಾಮೆ**- ಇಲ್ಲ ನಾನಿಲ್ಲಿಯೇ ನಿಲ್ಲುವೆನು ನನಗೇನು ಭಯ ?

**ಸತ್ರಾಜಿ**- ಬಹು ಉದ್ಧಟ ವೃತ್ತಿಯವಳು ನೋಡಿ ನೀನು.

**ಪ್ರಸೇನ**- ( ಮೃಗಯಾವೇಷದಿಂದ ಬಂದು )

॥ ರಾ॥ ಚಾಲ॥ ಡಿ ಹೌಂ ಡಾಂ ತಬಾಜ ॥

॥ **ಪದ** ॥ ಬಲಶಾಲಿಯಾಗುವೆನು । ಸಲೆ ಬೇಟೆಯಾಡೀ ವನದೆ ।
ವೀರಾವೇಶದಿಂದ ॥ ಪಲ್ಲ ॥
ಶರಗಳನು ಸುರಿಸಿ ಸರಿ । ಶಶಕ ಜಿಂಕೆಗಳ ।
ಹುರಿದು ಬಿಡುವೆನು ಕುಲವ ನೀದಿನದಿ । ಗಳಿಲಾ ।

**ಸತ್ಯಭಾಮೆ**- ಅಹಹಹ ನರಿ ಮೊಲಗಳ ಮೇಲೆ ಪರಾಕ್ರಮವನ್ನು ತೋರುವ ನಮ್ಮ ಚಿಕ್ಕಪ್ಪನು ಎಂತಹ ಶೂರನು ?

**ಸತ್ರಾಜಿ**- ತಾಯೀ ನಿನಗೆ ಕಯ್ಯನ್ನಾದರೂ ಮುಗಿಯಲೇ ?

**ಪ್ರಸೇನ**- ಕುಮಾರಿಯು ಏನು ಹೇಳುತ್ತಿರುವಳು ?

**ಸತ್ರಾಜಿ**- ಯೇನೂ ಇಲ್ಲ ಮೃಗಯಾರ್ಥ ವನಕ್ಕೆ ಹೋಗತಕ್ಕ ನೀನು ಜತೆಯಲ್ಲಿ ಯಾರನ್ನಾದರೂ ಕರೆದುಕೊಳ್ಳದೇ ಹೋಗಬಾರದೆಂದು ಹೇಳಿದಳು.

**ಪ್ರಸೇನ**- ಮಗೂ, ನಾನು ಪರರ ಸಹಾಯವನ್ನು ಒಯಸತಕ್ಕವನೇ ? ಸ್ವಯಂಶೂರನಿದ್ದೇನೆ ಸ್ವಯಂಶೂರನು. ನಾನು ಬೇಟೆಗಾಗಿ ವನವನ್ನು ಸೇರಿದ ಕೂಡಲೇ ನರಿ, ಮೊಲ, ಇಲಿ, ಜಿಂಕೆ, ಮೊದಲಾದ ಮೃಗಗಳೂ ಅಂಚ, ಕೊಂಚ, ನವಿಲು ಮೊದಲಾದ ಖಗಗಳೂ ಗಡಗಡನೇ ಗಡಗಡನೇ ನಡುಗಲಾರಂಭಿಸುವವು ಬಲ್ಲಿಯಾ?

**ಸತ್ಯಭಾಮೆ**- ಚಿಕ್ಕಪ್ಪನೇ ಅಕಸ್ಮಾತ್ತಾಗಿ ಸಿಂಹ, ಶಾರ್ದೂಲ, ಕಾಡಾನೆಗಳೇನಾದರೂ ಎದುರಿಸಿದರೇ

**ಪ್ರಸೇನ**- ಅವೆಲ್ಲ ರಾತ್ರಿ ಸಂಚರಿಸತಕ್ಕ ಪ್ರಾಣಿಗಳು. ರಾತ್ರಿಯ ಬೇಟೆಯು ಮೋಸಗಾರರದು. ನಾನು ಹಗಲಿನಲ್ಲಿ ಸೂರ್ಯಪ್ರಕಾಶದಲ್ಲಿ ಸಕಲ ಜಗವೂ ಜಾಗೃತವಿರುವಾಗ ಬೇಟೆಯಾಡತಕ್ಕವನು.

**ಸತ್ಯಭಾಮೆ**- ಒಂದು ಸಮಯ ಹಗಲಿನಲ್ಲಿಯೇ ಸಿಂಹ, ಶಾರ್ದೂಲಗಳು ಎದುರಿಸಿದರೇ?

**ಸತ್ರಾಜಿ**- ಮಗೂ! ನೀನು ಮಹಾ ಅಧಿಕಪ್ರಸಂಗಿಯು ನೋಡೇ.!

**ಸತ್ಯಭಾಮೆ**- ಅಲ್ಲಾ ! ಸ್ವಾಭಾವಿಕವಾಗಿ ಕೇಳಿದೆನು.

**ಪ್ರಸೇನ**- ಎದುರಿಸಿದರೇನಾಯಿತು? ಇದೋ ( ಶಂಖವನ್ನ ತೋರಿಸಿ ) ಈ ಶಂಖವೇನಿದೆಯೋ ಇದನ್ನು ಹೊಡೆಯುವೆನು.

**ಸತ್ಯಭಾಮೆ**- ಏನು? ಶಂಖಾ ಹೊಡೆಯುವಿರಾ?

**ಪ್ರಸೇನ**- ಅಹುದು. ಇದನ್ನು ಜೋರಾಗಿ ಹೊಡೆಯುವೆನು, ಕೂಡಲೇ ಅವು ಓಡಿ ಹೋಗುವವು. ತತ್‍ಕ್ಷಣ ಬಾಣ ಬಿಟ್ಟು ಕೊಂದುಹಾಕುವೆನು. ಇರಲಿ ಇನ್ನು ನಾನು ಹೋಗುವೆನು. ಎಲೋ ನನ್ನ ರಥವು ಸಿದ್ಧವಿರುವದೇ?

**ತೆರೆ**- ಸಿದ್ಧವಿರುವದು ಒಡ್ಡಿ!

**ಪ್ರಸೇನ**- ಹಾಗಾದರೆ ಇನ್ನೊಂದು ಬುಡ್ಡಿ ಮದ್ಯವನ್ನು ಕುಡಿದು ಹೊರಡುವಾ ( ಹೋಗುವನು )



ಪ್ರಸೇನನನ್ನು ಶಾರ್ದೂಲವು ಕೊಲ್ಲುವದು.

( ಪ್ರವೇಶ )

**ಜಾಂಬುವಂತ**- ಏನು ದುಷ್ಟ ಶಾರ್ದೂಲವಿದು? ನನ್ನ ರಾಜ್ಯದಲ್ಲಿನ ಗೋಧನಗಳನ್ನು ತಿಂದು ಹಾಳು ಮಾಡುವದಲ್ಲದೇ ನಿತ್ಯಶಃ ನನ್ನ ಪ್ರಜಾವರ್ಗದವರಲ್ಲಿ ಒಬ್ಬಿಬ್ಬರನ್ನು ಕೊಂದು ತಿನ್ನುತ್ತಿರುವದು. ಅದನ್ನು ಸಂಹರಿಸುವದಕ್ಕಾಗಿ ಏನು ಪ್ರಯತ್ನಪಟ್ಟರೂ ವ್ಯರ್ಥವಾಗುತ್ತಲಿದೆ. ಪ್ರಜಾಪೀಡಕವಾದ ಆ ದುಷ್ಟ ಮೃಗವನ್ನು ತೀವ್ರವಾಗಿ ಸಂಹರಿಸದಿರುವದು ಈ ಜಾಂಬುವಂತನ ಕೀರ್ತಿಗೆ ಕಲಂಕವೇ ಸರಿ. ಏನಾದರೂ ಆಗಲಿ ಇಂದು ಆ ದುಷ್ಟ ಮೃಗವನ್ನು ಸಂಹರಿಸದೇ ಯಾವಕಾಲಕ್ಕೂ ಬಿಡಬಾರದು. ( ಗರ್ಜನೆ ) ಏನೋ ಗರ್ಜಿಸುತ್ತಿರುವದು? ಅದೇ ಶ್ವಾಪದವು. ಜತೆಯಲ್ಲಿ ಶಂಖನಾದವೂ ಕೂಡಾ ಕೇಳಿಸುತ್ತಲಿದೆ. ಯುದ್ಧದಲ್ಲೂದುವ ಶಂಖವನ್ನು ಶಾರ್ದೂಲದ ಎದುರಿನಲ್ಲೂದುವ ಪಂಡಿತನಾವನಿರಬಹುದು? ( ದೂರ ನೋಡಿ ) ಅದೋ ಯಾವನೋ ಕ್ಷತ್ರಿಯನು. ಶಂಖವನ್ನು ಹೊಡೆಯುತ್ತ ಮುಂದೆ ಓಡುವನು. ಶಾರ್ದೂಲವು ಬಹು ರಭಸದಿಂದ ಅವನ ಬೆನ್ನುಹತ್ತಿರುವದು. ಅಯ್ಯೋ ಅಯ್ಯೋ ಅವನನ್ನು ಸಮೀಪಿಸಿತು. ಬಹೂ ದೂರದಲ್ಲಿದೆ ಬಾಣವನ್ನು ಬಿಟ್ಟರೂ ಪ್ರಯೋಜನವಿಲ್ಲ. ಹತ್ತಿರಕ್ಕೆ ಹೋಗಿಯೇ ಅದನ್ನು ಸಂಹರಿಸುವಾ? (ಓಡುವನು ಕೇಡಿನಲ್ಲಿ ಪ್ರಸೇನನನ್ನು ಸಿಂಹವು ಕೊಲ್ಲುವಷ್ಟರಲ್ಲಿ ಜಾಂಬುವಂತನು ಸಿಂಹವನ್ನು ಕೊಲ್ಲುವನು. ಮತ್ತು ಮೃತ ಶರೀರದ ಹತ್ತಿರ ಒಂದು ಕಿರೀಟ ಕುಂಡಲಗಳನ್ನೂ ಮಣಿಯನ್ನೂ ಪಡೆಯುವನು. )

— ೩ ೧ ನೇ ಅಂಕ ಸಮಾಪ್ತ ೩ —

## ೨ ನೇ ಅಂಕವು



ಪ್ರವೇಶ ॥ ಬಾಲಕಿಯರು ವಿನಾಯಕ ಸ್ತುತಿಯನ್ನು ಮಾಡುತ್ತಾ ರಾಜಮಾರ್ಗದಲ್ಲಿ ಬರುತ್ತಿರುವರು.

ರಾಗ. ತೆಲುಗ. ತಾಲ ದಾದರಾ.

॥**ಪದ**॥ ಶ್ರೀ ಗಿರಿಜಾತೆಯು ತನಯಾ ॥ ಪಲ್ಲ ॥
ನಿಗಮಾಗಮಗಳ ಹೃದಯಾ ।
ಸುಗುಣಾರ್ಣವ ದಿವ್ಯ ಕಾಯಾ ।
ಜಗದೋದ್ಧಾರಕನೆನಿಸಿಹ । ಭೋ ।
ಗಜಾಸ್ಯ ಗಣರಾಯಾ ॥ ೧ ॥
ಯೋಗಿಗಳಾಮೋದವಿಷಯ ।
ಜಗವೆಲ್ಲವು ನಿನ್ನ ಕೃಪೆಯು ।
ಬಗೆಯುವರ್ಕೈ ಮಹಾಕಾಯ ।
ನಿ ಸ ಗ ಮ, ಸ ಗ ಮ ಪ, ಗ ಮ ಪ ಸಿ
ಪ ನಿ ಸ ರಿ, ಸ ಸ್ಸ ನಿ ಪ ಮ, ಗ ಮ ॥
ಮಘವಾಧಿಕ ಸುರಸೇವ್ಯಾ ॥ ೨ ॥
ನಿನ್ನಯ ಪಾದಾಂಭೋಜಗ ।
ಳನ್ನು ನೆನೆವ ಭಕುತಾಳಿಯು ।
ಉನ್ನತ ಸುಖವಿಹ ಪರದಲಿ ।
ಸ ಸ್ಸ ನಿ ಪ ಮ, ಪ ನಿ ಪ ಮ ಗ ಮ, ಸಾ ಗ ಮ ಪ ನಿ
ಸ ರಿ ಸ ನಿ ಪ ಮ । ನನ್ನೆಯಿಂದ ಪಡೆವರಯ್ಯ

**ವಿಜಯ**– ( ಅವಸರದಿಂದ ಬಂದು ಬಾಲಿಕೆಯರನ್ನು ನೋಡಿ ) ಬಾಲಕಿಯರೇ ! ಇದನ್ನೇನು ನಡೆಸಿರುವಿರಿ.

೧ **ನೇ ಬಾಲಕಿ**– ವಿಜಯನೇ ನಾವು ವಿನಾಯಕನ ಸ್ತುತಿಯನ್ನು ಮಾಡುತ್ತಿರುವೆವು.

**ವಿಜಯ**– ವಿನಾಯಕ ಸ್ತುತಿಯನ್ನು ಮಾಡುವದಾದರೆ ರಾಜಬೀದಿಯಲ್ಲೇಕೆ? ಅನಾಯಾಸವಾಗಿ ಇಂದು ವಿನಾಯಕ ಚವತಿಯಾಗಿದೆ. ವಿಘ್ನೇಶ್ವರನ ಸಮ್ಮುಖದಲ್ಲಿಯೇ ನಿಂತು ಸ್ತುತಿಸಿದ್ದರೆ ಮತ್ತು ಶ್ರೇಯಸ್ಕರವಾಗುತ್ತಿದ್ದಿಲ್ಲವೇ?

**೨ ನೇ ಬಾಲಕಿ**- ಅಹುದಹುದು ಗೆಳತಿಯರೇ! ಇಂದು ವಿನಾಯಕ ಚವತಿಯು. ವಿಜಯನ ಸೂಚನೆಯಂತೆ ವಿಶ್ವೇಶ್ವರನ ಸಮ್ಮುಖದಲ್ಲಿಯೇ ನಿಂತು ಆತನ ಸ್ತುತಿಯನ್ನು ಮಾಡುವಾ ಬನ್ನಿರಿ!

**ವಿಜಯ**- ಹಾಗೆ ಮಾಡುವದಾದರೆ- ನನ್ನಗೂಡ ಅರಮನೆಗೆ ನಡೆಯಿರಿ

**ಬಾಲಕಿಯರು**- ಅದೇಕೆ?

**ವಿಜಯ**- ಅಲ್ಲಿ ಒದು ವಿಜೃಂಭಣೆಯಿಂದ ವಿನಾಯಕನ ಪ್ರತಿಷ್ಠಾಪನೆಯನ್ನು ಮಾಡಿದ್ದಾರೆ. ಬಲರಾಮ ಶ್ರೀಕೃಷ್ಣ ಮಹಾರಾಜರೂ ಮತ್ತೂ ಇತರ ಯಾದವ ನರನಾರಿಯರೂ ಅಲ್ಲಿ ಸೇರಿರಬಹುದು. ಅವರ ಸಮ್ಮುಖದಲ್ಲಿಯೇ ನಿಂತು ನೀವು ನಿಮ್ಮ ಮಧುರ ಕಂಠಸ್ವರದಿಂದ ವಿನಾಯಕನ ಗುಣಗಾನವನ್ನು ಮಾಡಿದುದಾದರೆ? ಎಲ್ಲರಿಗೂ ಸಂತೋಷವಾಗುವದಲ್ಲದೇ ಅಯಂವಿಶೇಷ ಪಾರಿತೋಷಕವೂ ಸಹಾ ದೊರೆಯಬಹುದು. ಪ್ರಯುಕ್ತ ನನ್ನಗೂಡ ಅರಮನೆಗೆ ನಡಿಯಿರಿ.

**೩ ನೇ ಬಾಲಕಿ**- ಅಹುದಹುದು ಗೆಳತಿಯರೇ ವಿಜಯನ ಸೂಚನೆಯಂತೆ ನಡೆದುಕೊಳ್ಳುವದೇ ಯೊಗ್ಯವು ನಡಿಯಿರಿ.

**ವಿಜಯ**- ಇರಲಿ ಈ ನಿಮ್ಮ ಸಮಾಜದ ಮುಖ್ಯಸ್ಥಳಾರು?

**೧ ನೇ ಬಾಲಕಿ**- ನಾನು.

**ವಿಜಯ**- ಇವರೆಲ್ಲರೂ ನಿನ್ನ ಹೇಳಿಕೆಯಂತೆ ನಡೆಯುವರೋ?

**೧ ನೇ ಬಾಲಕಿ**- ಅಹುದು.

**ವಿಜಯ**- ಹಾಗಾದರೆ! ನೀನು ಮಾತ್ರ ನನ್ನ ಹೇಳಿಕೆಯಂತೆ ನಡೆದುಕೊಳ್ಳಬೇಕು.

**೧ ನೇ ಬಾಲಕಿ**- ಅದೇಕೆ?

**ವಿಜಯ**- ಪಾರಿತೋಷಕವು ಬೇಕಾದರೆ?

**ಎಲ್ಲರೂ**- ಆಗಲಿ. ನಡೆಯಿರಿ. (ಹೋಗುವರು.)

( ಪ್ರವೇಶ ೨ )

.. ಗಣೇಶನ ದೇವಾಲಯ, ಶ್ರೀಕೃಷ್ಣ, ಬಲರಾಮ, ಗರ್ಗ ಗುರು ಕುಳಿತಿರುವರು
ವಿಜಯನು ಬರುವನು.

**ವಿಜಯ**- ಉಭಯ ಮಹಾರಾಜರಿಗೂ ವಿಜಯವಾಗಲಿ! ಮಹಾಸ್ವಾಮಿ ಯವರ ಆಜ್ಞಾನುಸಾರ ವಿನಾಯಕ ಚವತಿಯ ಮಹೋತ್ಸವಕ್ಕಾಗಿ ನಾನೂ ಕೂಡ ಒಂದು ಮೇಳವನ್ನು ಏರ್ಪಡಿಸಿಕೊಂಡು ಬಂದಿರ ವೆನು.

**ಕೃಷ್ಣ**- ಇದೇ ಏನೋ ನಿನ್ನ ಮೇಳಿವು.

**ವಿಜಯ**- ಅಹುದು ಮಹಾಸ್ವಾಮಿ. ( ಬಾಲಕಿಯರಿಗೆ ಕಣ್ಣು ಸನ್ನೆ ಮಾಡುವನು )

**ಕೃಷ್ಣ**- ನೀನೇ ಇವರಿಗೆ ಗಾಯನಾಭಿನಯಗಳ ಶಿಕ್ಷಣವನ್ನು ಕೊಟ್ಟಿರು ವೆಯಾ?

**ವಿಜಯ**- ಅಹುದು ಮಹಾಸ್ವಾಮಿ!

**ಬಲರಾಮ** -ಎಂದಿನಿಂದ ನೀನು ಗಾಯನಾಭಿನಯಕಲಾಕೋವಿದನಾದೆ?

**ವಿಜಯ**- ಮಹಾಸ್ವಾಮಿ! ನನ್ನ ಬಿಡಾರದ ಹತ್ತಿರನೇ? ಭರತನ ನಾಟ್ಯ ಮಂದಿರವಿದೆ ನಿತ್ಯಶಃ ಆ ಮಾರ್ಗವಾಗಿ ತಿರುಗಾಡುವಾಗ್ಗೆ ಶ್ರವಣ ಬಲ ವಿಶೇಷದಿಂದ ಈ ಕಲೆಯನ್ನು ವಿಶೇಷವಾಗಿ ಪರಿಚಯ ಮಾಡಿ ಕೊಂಡಿದ್ದೇನೆ. ಈ ಬಾಲಕಿಯರ ಪರಿಮುಖದಿಂದ ಆ ನನ್ನ ವಿದ್ಯೆ ಯು ಫಲರೂಪವಾಗಿ ಕಾಣಬಹುದು ( ಪುನಃ ಸನ್ನೆ ಮಾಡುವನು )

**ಕೃಷ್ಣ**- ಹಾಗಾದರೆ ತಡವೇಕೆ? ನಿನ್ನ ಮೇಳದ ಕಾರ್ಯ ಕ್ರಮವನ್ನಾ ರಂಭಿಸು.

**ವಿಜಯ**- ಹುಂ ಹೂಂ ಬಾಲಕಿಯರೇ! ಸ್ವಾರಸ್ಯಪೂರ್ಣವಾದ ಪದ್ಯ ವನ್ನು ಹೇಳಿ.

**ಬಾಲಕಿಯರು**- ರಾಗ. ಭೂಪ. ತ್ರಿತಾಲ.

॥**ಪದ**॥ ಗೌರಿಯ ಮನಮೋಹನ ಬಾಲಕನೇ? ॥ಪಲ್ಲ॥
ಗೌರವ ಪಡೆದಾ ಗಣನಾಯಕನೇ । ಅ॥ ಪಲ್ಲ ॥
ಗೌರಾಂಗನೇ ಗಂಭೀರನೆ ಧೀರನೇ ।

ಗೌರೀಶನ ವರವನು ಪಡೆದವನೆ ॥
ಪತಲದನವಾ। ರಣದವದನನೇ।
ಲೋಕವದಯುದಿಂದುದ್ಧರಿಸುವನೇ।
ರಾಕೇಂದು ವಭಾಲವಿ ಹಿಡಿದವನೇ।
ಯಾಕೆನ್ನೊಳು ವರೌನವೂ ಸುರನುತನೆ।
ನಿ ಸ ಗ ರಿ, ಪ ಗ ಧ ಪ, ಸ ಧ ರಿ ಸ, ಗ ರಿ ಸ ಧ ಪ,।
ಧ ಸ ರಿ ಗ, ಸ ರಿ ಗ ಪ, ರಿ ಗ ಪ ದ, ಗ ಪ ಧ ಸ ಧ,।
ಧ ಸ ರಿ ಗ ಪಾ, ಗೆ ಪ ಧ ಸ ಪಾ, ಧ ಸ ರಿ ಗ ಸ, ॥೨॥

**ಸಕಲರು**- ಬಹು ಸ್ವಾರಸ್ಯ ಬಹು ಸ್ವಾರಸ್ಯ.

**ಬಲರಾಮ**- ನಮ್ಮ ದ್ವಾರಕೆಯ ಎಲ್ಲ ಮೇಳಗಳಿಗಿಂತಲೂ ವಿಜಯನ ಮೇಳವು ಚನ್ನಾಗಿದೆ. ಏಕೆ? ಮಾಧವಾ?

**ಕೃಷ್ಣ**- ಮೇಳವೇನೋ ಚನ್ನಾಗಿದೆ. ಆದರೆ ಇವರ ನಾಯಕನು ವಿಜಯನೆಂದು ಮಾತ್ರ ನಂಬಲಾರೆ.

**ವಿಜಯ**- ಅದೇನು? ಮಹಾಸ್ವಾಮಿ ಹೀಗೇನು ಹೇಳುವಿರಿ? ನಿಶ್ಚಯವಾಗಿ ಇದು ನನ್ನ ಪರಿಶ್ರಮದಿಂದ ಸಿದ್ಧವಾದ ಸಮಾಜವೇ ಇದು.

**ಬಲರಾಮ**- ಛೆ. ಕೃಷ್ಣಾ! ವಿಜಯನು ಅಷ್ಟು ಸುಳ್ಳಾಡತಕ್ಕವನಲ್ಲ.

**ಕೃಷ್ಣ**- ಪಾಪವುಂಟೆ?

**ವಿಜಯ**- ನೋಡಿ ಮಹಾಸ್ವಾಮಿ! ನಿಮಗಿಂತಲೂ ಬಲರಾಮನು ಮಹಾರಾಜರಿಗೆ ನನ್ನ ಗುಣಪರಿಚಯವು ಚನ್ನಾಗಿದೆ.

**ಕೃಷ್ಣ**- ಇದ್ದಿರಬಹುದು.

**ಗರ್ಗ**- ಹಾಗಾದರೆ ಇನ್ನೂ ಒಂದು ಪದ್ಯವನ್ನು ಹೇಳಿಸಿ ನೋಡುವಾ?

**ವಿಜಯ**- ಹೂಂ ಬಾಲಕಿಯರೇ ಕೋಲುಗಳನ್ನು ಹಾಕುತ್ತಾ ಪದ್ಯವನ್ನು ಹೇಳಿ.

**ಕೃಷ್ಣ**- ಯಾವ ಪದ್ಯವನ್ನೋ?

**ವಿಜಯ**- (ಸನ್ನೆಯನ್ನು ಮಾಡುತ್ತ) ಇವರಿಗೆ ಗೊತ್ತುಂಟು.

**ಕೃಷ್ಣ**- ಆವರಿಗೆ ಗೊತ್ತುಂಟು ನಿನಗೆ ಮಾತ್ರ ಗೊತ್ತಿಲ್ಲವಲ್ಲ ವೆ? ಹಾಂ?

**ವಿಜಯ**:- ಛೆ. ಛೆ. ಸ್ವಾಮೀ ನನಗೂ ಗೊತ್ತುಂಟು..

( ಬಾಲಿಕಿಯರಿಗೆ ಹಾಡೆಂದು ಸಂಜ್ಞೆ ಮಾಡುವನು. )

**ಬಾಲಿಕಿಯರು**:- ರಾಗ—ಗರ— ತಾಲ—ದೀಪಚಂದಿ.

॥**ಪದ**॥ ನೆನೆಯುತಿರಲೂ। ವಿನಾಯಕನಂ।
ಮನದಿ ಸುನೆಯನ್ನು ಸುರಿಸುವನು।
ತನವೆ ಜನದಿಂ। ದ ಮರೆ ಹೋಗಿ।
ವಿನಯದಲಿ ಈ। ತನಿಗೆ ಬಾಗಿ॥ ೧॥
ಘನತೆಯನು। ಪೊಂದಿ ಇಹ ಪರ।
ಘಳಿಸ ವಮ ಸ್ವಜನೋದವನು॥ ೨॥

**ಬಲರಾಮ**:- ಬಹು ಸ್ವಾರಸ್ಯ! ಬಹೂ ಸ್ವಾರಸ್ಯ! ವಿಜಯನೇ ನಿನ್ನ ಸಾಹಸವನ್ನೂ ಕೌಶಲ್ಯವನ್ನೂ ಬಣ್ಣಿಸತಕ್ಕದ್ದು. ಕೃಷ್ಣಾ! ವಿಜಯ ನಿಗೂ ಆವನ ಮೇಳದವರಿಗೂ, ಸರಿಯಾದ ಸಂಭಾವನೆಯನ್ನು ಮಾ ಡಿಸು. ವಿಜಯನೇ ಕೃಷ್ಣನ ಸಂಗಡ ಹೋಗಬಹುದು.

**ಕೃಷ್ಣ**- ಬನ್ನಿ ಬನ್ನಿ. ಸರಿಯಾದ ಸಂಭಾವನೆಯನ್ನು ಮಾಡಿಸುವೆನು ಪರವಿಲ್ಲ. ಸಂಭಾವನೆಯ ತಕ್ಕ ಸಿದ್ಧತೆಯನ್ನು ಮಾಡಿಕೊಂಡು ಬಂದಿ ರುವಿರಿ. ( ಹೋಗುವರು )

ಪ್ರವೇಶ ( ರಾಜಾಂಗಣ )

**ಕೃಷ್ಣ**- ವಿಜಯನೇ ನಿಜವಾದ ಸಮಾಚಾರವನ್ನು ಹೇಳು ನಾನರಿಯದ ನಿನ್ನ ವಿದ್ಯೆಯಲ್ಲ.

**ವಿಜಯ**- ಮಹಾಸ್ವಾಮಿ! ಮಿಕ್ಕ ಸಂಗತಿಗಳೆಲ್ಲವಿರಲಿ. ಮೊದಲು ನನಗೇ ನು ಸಂಭಾವನೆಯಾಗತಕ್ಕದ್ದಿದೆಯೋ? ಅದಕ್ಕೆ ಅಪ್ಪಣೆಯಾಗಲಿ. ಸಾ ಯಂಕಾಲವಾಗುತ್ತ ಬಂತು. ಚವತಿಯ ಚಂದ್ರನು ಕಾಣುವಷ್ಟರಲ್ಲಿ ಮನೆಯನ್ನು ಸೇರಿಕೊಳ್ಳುವೆನು.

**ಕೃಷ್ಣ**- ಅದೇನೋ? ಚವತಿಯ ಚಂದ್ರನ ಸಲುವಾಗಿ ಇಷ್ಟೊಂದು ಭಯ ಪಡುವ ಕಾರಣವೇನು?

**ವಿಜಯ**:- ಮಹಾಸ್ವಾಮಿ! ವಿನಾಯಕ ಚವತಿಯ ದಿನ ಯಾವ ನರನಾರಿಯರು ಚಂದ್ರನನ್ನು ನೋಡುವರೋ, ಅವರು ದುರಪವಾದಕ್ಕೆ ಗುರಿಯಾಗುವದಲ್ಲದೆ ಬಹು ತೊಂದರೆ ಪಡುವರು.

**ಕೃಷ್ಣ**- ಹೀಗೆ ನಿನಗಾರು ಹೇಳಿದರು?

**ವಿಜಯ**- ವೃದ್ಧರು, ಶಾಸ್ತ್ರಗಳು, ಮತ್ತು ಅನುಭವವು. ಪ್ರಯುಕ್ತ ಬೇಗನೆ ಮನೆಯನ್ನು ಸೇರುವೆನು. ಶೀಘ್ರ ಕೊಡಿ (ಸ್ವಗತ) ಈ ಮೇಳದ ಒಡೆಯನಾದ ಭರತನು ಬರುವಷ್ಟರಲ್ಲಿ ಪಾರಿತೋಷಕವನ್ನು ಕೈಸೇರಿಸಿಕೊಂಡು ಬಿಡುವಾ? (ಪ್ರಕಾಶ) ಮಹಾಸ್ವಾಮೀ ಶೀಘ್ರ ಮನೆಯನ್ನು ಶೇರಬೇಕಾಗಿದೆ ಶೀಘ್ರ.

**ಕೃಷ್ಣ**-.ಇದೋ ತೆಗೆದುಕೊ. (ಮುತ್ತಿನ ಹಾರವನ್ನು ವಿಜಯನ ಕೊರಳಿನಲ್ಲಿ ಹಾಕುವನು. ಅಷ್ಟರಲ್ಲಿ ಭರತನು ಬರುವನು. ನೋಡಿ) ನೀನಾರು?

**ಭರತ**- ನಾನು ಭರತನು.

**ವಿಜಯ**- (ಸ್ವಗತ) ಕೆಲಸವು ಕೆಟ್ಟಿತು. (ಮುಸುಡಿಯನ್ನು ಕಿವುಚುವನು.)

**ಕೃಷ್ಣ**- ನಿನ್ನದೇನು ಕೆಲಸ?

**ಭರತ**- ಮಹಾಸ್ವಾಮಿ! ನಾನು ನನ್ನ ಮೇಳದ ಬಾಲ ಬಾಲಕಿಯರೊಂದಿಗೆ ಸನ್ನಿಧಿಗೆ ಬರಬೇಕೆಂದಾಲೋಚಿಸುವಷ್ಟರಲ್ಲಿ ಈ ವಿಜಯನು ಮೋಸದಿಂದ ನನ್ನ ಸಂಘದವರನ್ನು ತಾನು ಕರೆದುಕೊಂಡು ಬಂದು ತಮ್ಮ ಸನ್ನಿಧಿಯಲ್ಲಿ ಅವರ ಕಾರ್ಯಕ್ರಮಗಳನ್ನೆಲ್ಲವನ್ನೂ ನೆರವೇರಿಸಿ ನನಗೆ ಸಲ್ಲತಕ್ಕ ಪಾರಿತೋಷಕವನ್ನು ತಾನು ಅಪಹರಿಸಿಕೊಂಡಿದ್ದಾನೆ.

**ಕೃಷ್ಣ**- ಸರಿ. ನಾನಾಲೋಚಿಸಿದಂತೆ! ವಿಜಯಾ ಸ್ವಲ್ಪದರಲ್ಲಿಯೇ ವ್ಯತ್ಯಾಸವಾಯಿತಲ್ಲವೇ? ಕೊಟ್ಟು ಬಿಡು ಭರತನ ಪಾರಿತೋಷಕವನ್ನವನಿಗೆ!

**ವಿಜಯ**- (ಹಾರವನ್ನು ತೆಗೆದು ಭರತನ ಕೊರಳಲ್ಲಿ ಹಾಕುತ್ತ) ಇದೋ ಭರತಾಚಾರ್ಯರೇ! ತೆಗೆದುಕೊಳ್ಳಿ ನಿಮ್ಮ ಪಾರಿತೋಷಕವನ್ನು? ಸತ್ಯವಾಗಿ

ಹೇಳಿ. ಶ್ರೀ ಕೃಷ್ಣಮಹಾರಾಜರು ಸಮ್ಮುಖದಲ್ಲಿಯೇ ಇದ್ದಾರೆ! ಸ್ವತಂತ್ರವಾಗಿ ನೀವು ನಿಮ್ಮ ಮೇಳವನ್ನು ಕಟ್ಟಿಕೊಂಡು ರಾಜಸ್ಥಾನವನ್ನು ಸೇರಿ ನಿಮ್ಮ ಕೌಶಲ್ಯವನ್ನು ಪ್ರದರ್ಶಿಸಿದ್ದರೆ? ಇಷ್ಟು ಘನವಾದ ಪಾರಿತೋಷಕವು ಸಿಗುತ್ತಿತ್ತೆ! ದಾಕ್ಷಿಣ್ಯವು ಬೇಡ ಪರಿಷ್ಕಾರವಾಗಿ ಹೇಳಿ.

**ಭರತ**- ( ಅನುಮಾನಿಸುವನು )

**ಕೃಷ್ಣ**- ವಿಜಯಾ? ನಾನೆದುರಿನಲ್ಲಿರುವೆನೆಂದು ಭರತನು ಹೀಗೆ ಸಂಕೋಚಪಡುವನು. ನಿಜವಾಗಿಯೂ ನೀನು ಹೇಳಿದಂತೆ ಅವನು ಸ್ವತಂತ್ರನಾಗಿ ಬಂದಿದ್ದರೆ? ಇಷ್ಟು ಪಾರಿತೋಷಕವು ಸಿಗುತ್ತಿದ್ದಿಲ್ಲ. ಆಯಿತು ಯಾರ ಪರಿಮುಖದಿಂದಲಾದರೂ ಬಡವನ ಕಲ್ಯಾಣವಾಯಿತು. ಅಸ್ತು ಭರತಾ ನಡೆ. ಇನ್ನುಮೇಲೆ ಮಾತ್ರ ಹೀಗೆ ನಿನ್ನ ಮೇಳದವರನ್ನು ಶಿಕ್ಕ ಶಿಕ್ಕಲ್ಲಿ ಬಿಡಬೇಡ. ವಿಜಯಾ ನನ್ನನ್ನು ಮಂದಿರದ ಮಟ್ಟಿಗೆ ತಿಳಿಸುವದಕ್ಕೆ ಬರುವದಿಲ್ಲವೆ?

**ವಿಜಯ** :-ಬರುವೆನು ಮಹಾಸ್ವಾಮೀ! ಆದರೆ ನನಗೆ ಹಿಂತಿರಗುವುದಕ್ಕೆ ತೀವ್ರವೇ ಅಪ್ಪಣೆಯಾಗಬೇಕು. ಯಾಕಂದರೆ ಚವತಿಯ ಚಂದ್ರನು ಕಾಣುವಷ್ಟರಲ್ಲಿ ಮನೆಯನ್ನು ಸೇರುವೆನು.

**ಕೃಷ್ಣ** :-ಎಲೋ ಈಗಲಂತೂ ಸೂರ್ಯಾಸ್ತವಾಯಿತು. ನಭೋಮಂಡಲದಲ್ಲಿ ಈ ಸಮಯಕ್ಕೆ ಚವತಿಯ ಚಂದ್ರನು ಕಾಣುತ್ತಿರಬಹುದು ಬೇಕಾದರೆ ನೋಡು.

**ವಿಜಯ** :-ಉಂಟೇ! ಯಾವ ಕಾಲಕ್ಕೂ ಹಾಗೆ ಮಾಡಲಾಗದು. ಅಲ್ಲದೇ ತಾವಾದರೂ ನೋಡಬೇಡಿ ಬೇಕಾಗಿ ವಿಷಪರೀಕ್ಷೆಯನ್ನು ಮಾಡುವದೇಕೆ? ತಲೆಬಾಗಿಸಿಕೊಂಡು ನಡೆದು ನಿಲಯವನ್ನು ಸೇರುವಾ ನಡೆಯಿರಿ.

**ಕೃಷ್ಣ** :-ಮಹಾ ಮೂರ್ಖನಲ್ಲವೇ? ನೀನು?

**ವಿಜಯ** :-ಆದರೂ ಪರವಿಲ್ಲ. ಆಕಾಶವನ್ನು ನೋಡಲಾಗದು. ನಡೆಯಿರಿ [ಹೋಗಲು ಉದ್ಯುಕ್ತರಾಗುವರು] ಮಹಾಸ್ವಾಮಿ! ಮಳೆಯಾದ



ಕೃಷ್ಣ:-- ತಪತಿಯು ಚಂದ್ರನಿಗೇ । ಏತಕೀ ತೆರ ಭೀತಿಗೊಳ್ಳುವಿರೋ ॥

ದಕ್ಕೆ ಮಾರ್ಗವೆಲ್ಲವೂ ಕರ್ದಮಮಯವಾಗಿದೆ. ಕಾಲುಗಳು ಜಾರಿ ಹೋದಾವು ಪ್ರಯುಕ್ತ ಮೆಲ್ಲಗೆ ಒನ್ನಿ ಅಥವಾ ನನ್ನ ಆಧಾರವನ್ನು ತಕ್ಕೊಳ್ಳಿ.

**ಕೃಷ್ಣ** :–(ಹಾಗೆ ಮಾಡಿ ಹೋಗುವಾಗ್ಗೆ) ವಿಜಯಾ ? ಅದೇನು ಗೋವಿನ ಹೆಜ್ಜೆಯು ಜಲದಲ್ಲಿ ಕಾಣಿಸುತ್ತಿರುವದು.

**ವಿಜಯ** :–ಅಯ್ಯೋ ಪ್ರಮಾದವು ಪ್ರಮಾದವು! ಮಾಡಿದ ಸಾಹಸ ವೆಲ್ಲವೂ ಮಣ್ಣುಪಾಲಾಯಿತು. ಅದೊ ಅವನೇ ಚವತಿಯ ಚಂದ್ರನು.

**ಕೃಷ್ಣ** :–ಇನ್ನೇನು ಜಲದಲ್ಲಿ ಅವನ ಪ್ರತಿಛ್ಛಾಯೆಯನ್ನು ನೋಡಿದ ಬಳಿಕ ಪ್ರತ್ಯಕ್ಷ ನೋಡುವದರಲ್ಲಿ ಹಾನಿಯೇನು ?

**ವಿಜಯ** :–ಆದರೂ ಬಿಂಬಕ್ಕೂ ಪ್ರತಿಬಿಂಬಕ್ಕೂ ವ್ಯತ್ಯಾಸವಿದೆ.

**ಕೃಷ್ಣ** :–ಏನಿದ್ದರೂ ನಾನು ನೋಡಿಯೇ ಬಿಡುವೆನು. ಆದದ್ದಾಗಲಿ.

**ವಿಜಯ** :–ಮಹಾಸ್ವಾಮಿ ! ತಾವು ಬಲವಂತರು ಹೇಗಾದರೂ ಮಾಡಿ ಕೊಳ್ಳಿ ನನಗೆ ಮಾತ್ರ ತಮ್ಮಂತೆ ಸಾಹಸಪಡಲು ಧೈರ್ಯವು ಸಾಲದು. ನಡೆಯಿರಿ. ಹೋಗುವಾ ಮೊದಲು ಮಂದಿರವನ್ನು ಸೇರುವಾ ?

**ಕೃಷ್ಣ** :–(ವಿಜಯನಿಗೆ ಚಂದ್ರನನ್ನು ತೋರಿಸುವ ಯತ್ನವನ್ನು ಮಾಡು ವನು ಅವನು ಭಯಗೊಂಡು ನೆಲವನ್ನು ನೋಡುತ್ತಿರುವನು)

ರಾಗ ಇಂದು ಬಿಂಬವೊ

ರಾಗ॥ ಶುದ್ಧಕಲ್ಯಾಣಿ॥ ತಾಲದಾದರಾ

**ಪದ**॥ ಏತಕೀತೆರಭೀತಿ। ಗೊಳ್ಳುವೆಯೊ।
ಚವತಿಯ ಚಂದ್ರನಿಗೇ ॥ ಪ ॥
ಸತತದಿ ಸುರಿಸುವನಮೃತ ಕ್ಷಿತಿಗೆ ಶಾಂತಪು
ರುತಿಯೊ ॥ ಅತುಲಾನಂದವನೀಯುವನಾತನಿಂ।
ದಕೇಡಾಗುವದೆಂತು ಪೇಳು ವಿಜಯನೆಜವ ॥ ೧ ॥
ಶಿವನು ಶಾಪವನೀವನಾದರೆ। ಶಿವನು ತನ್ನೆಯಾ।
ಶಿರದಳಿತಕಿರಿಸಿಕೊಂಡನು? ಸಾವಧಾನವಿ ಪ
ರ್ಯಾಲೋಚಿಸು ವಿಜಯನೆ ॥ ೨ ॥ (ಹಾಗೇ ಹೋಗುವರು)

(ಪ್ರವೇಶ ॥ ಸತ್ರಾಜಿತ.)

**ಸತ್ರಾಜಿತ** :–ಏನಿದಾಶ್ಚರ್ಯ? ತಮ್ಮನಾದ ಪ್ರಸೇನನ ಶೋಧವು ಈಗ್ಗೆ ಒಂದು ತಿಂಗಳಿಂದ ಒಂದೇ ಸಮನೇ ನಡದಿದೆ. ಆದರೂ ಅವನ ವೃತ್ತಾಂತವು ಗೊತ್ತಾಗಲಿಲ್ಲ. ಅವನ ಕೊಲೆಯಾಗಿರಬಹುದೆಂಬ ಅನುಮಾನವೇ ದೃಢವಾಗುತ್ತ ನಡೆದಿದೆ. ಒಂದು ಪಕ್ಷಕ್ಕೆ ಯಾರ ನಿರ್ಬಂಧದಲ್ಲಾದರೂ ಅವನು ಇಡಲ್ಪಟ್ಟಿದ್ದರೆ? ಇಷ್ಟು ಹೊತ್ತಿಗೆ ಗೊತ್ತಾಗದೇ ಇರುತ್ತಿತ್ತೆ?

ರಾಗ॥ ತೆಲಂಗ॥ ತಾಲ॥ ದಾದರಾ

॥**ಪದ**॥ ಮನಸವು ನೊಂದಿಹುದೊ | ಮಾಯವಾದುದಕೆ | ಪ್ರಸೇನನು ॥
ಅನುಜನವಾರ್ತೆಯನರಿಯೆನು | ಅನುದಿನತಾಪದಲಿಸಿತ ರೋಷ
ಘನಿರಾಶೆಸ್ಪ್ರನ ವಾರ್ತೆಯನು ಕೇಳಿ ಚಿಂತಿಪ ॥ ೧ ॥
ಕುವರನ ತೆಂದೇ ಅವನನು ಸಲಹಿದೆ | ಬಲು ಪ್ರೇಮದಿ |
ನಾನೂ | ಈ ವಿಯೋಗ ಜನ್ಯವಾಯಿತು | ವದನಕಾನಾಕ್ಷೀ |
ತವಾಗಿ ॥ ೨ ॥

**ಮಧುಕರ** :–(ಒಂದು) ಏನು ಸತ್ರಾಜಿತನೇ! ಪ್ರಸೇನನ ವೃತ್ತಾಂತವು ಗೊತ್ತಾಯಿತೇ?

**ಸತ್ರಾಜಿತ** :–ಇಲ್ಲವೋ? ಮಧುಕರಾ! ಅವನ ಶೋಧದ ಸಲುವಾಗಿ ಬಹೂ ಪ್ರಯತ್ನ ಪಡುತ್ತಲಿದ್ದೇನೆ. ಅವನ ಮಡದಿಯಂತೂ ಕಡುದುಃಖಿತಳಾಗಿದ್ದಾಳೆ.

**ಮಧುಕರ** :–ಪಾಪ. ಪಾಪ. ಅವಳ ದೈವದಲ್ಲೇನಿರುವದೊ? ಏನೊ?

**ಸತ್ರಾಜಿತ** :–ಮಧುಕರನೇ ಪ್ರಸೇನನೇನಾಗಿಬಹುದೊ?

**ಮಧುಕರ** :–ನಾನೆಂದೋ ಹೇಳಿದ್ದೇನೆ. ಅವನಾಶಮಂತಕಮಣಿಯ ಸಲುವಾಗಿ ಘಾತಕವಾಗಿರಬಹುದೆಂದು.

**ಸತ್ರಾಜಿತ** :–ಅವನ ಸ್ವಾಧೀನದಲ್ಲಿರುವ ಆ ಮಣಿರಾಜವನ್ನು ಸಾಧಾರಣರು ಅಪಹರಿಸಬಲ್ಲರೇ?

**ಮಧುಕರ** :–ಇದು ಸಾಧಾರಣದ ವಿಷಯವೇ ಅಲ್ಲ. ಯಾರೊ ಬಹು ದಿನಗಳಿಂದ ಕಾದುಕೊಂಡಿದ್ದ ಬಲಶಾಲಿಗಳೇ ಹೀಗೆ ಮೋಸ ಮಾಡಿರಬಹು

ದಾಗಿ ಕಾಣುತ್ತೆ.

**ಸತ್ರಾಜಿತ** :—ಅದಾರಿರಬಹುದು ?

**ಮಧುಕರ** :—ಅದೇ ಪರ್ಯಾಲೋಚಿಸತಕ್ಕ ವಿಷಯ.

**ಸತ್ರಾಜಿತ** :—ನನ್ನ ತಮ್ಮನಿಗೆ ಸಿಕ್ಕಭಾಗ್ಯಕ್ಕಾಗಿ ಮತ್ಸರ ಪಡುವವರದೇ! ಈ ಕೃತಿಯಾಗಿರಬಹುದು.

**ಮಧುಕರ** :— ಸಂದೇಹವೇನು? ಪ್ರಪಂಚದಲ್ಲಿ ಪರೋತ್ಕರ್ಷಾಸಹಿಷ್ಣುಗಳೇನು ಅಲ್ಪಸ್ವಲ್ಪರೇ? ಮಹಾಮಣಿಯ ಸಹಾಯದಿಂದ ಪ್ರಸೇನನು ಉತ್ತರೋತ್ತರ ಘನತೆಯನ್ನು ಹೊಂದುವನೆಂತಲೂ, ಜಗದ್ವಿಖ್ಯಾತನಾಗುವನೆಂತಲೂ, ವಿಶೇಷವೇನು? ಈ ಭೂಮಿಯ ಕುಬೇರನಾಗುವನೆಂತಲೂ,ಹಾಗಾದಬಳಿಕ ಈಗಿರುವ ಶ್ರೀಮಂತರು ಅವನಿಗೆ ತಲೆಬಾಗಿ ನಡೆಯಬೇಕಾಗುವದೆಂಬ ವಿಚಾರಗಳಿಂದ ಯಾವನಾದರೂ ಮತ್ಸರಿಯು ಮೋಸಮಾಡಿರುವದೇ ಖಂಡಿತ.

**ಸತ್ರಾಜಿತ** :—ಅದಾರಿರಬಹುದು?

**ಮಧುಕರ** :—ಅದೇ ! ಆಲೋಚಿಸತಕ್ಕ ಸಂಗತಿಯು. ಇರಲಿ ಮೊದಲೊಂದು ಸಂಗತಿಯ ಪರಿಷ್ಕಾರವನ್ನು ಮಾಡುವಾ ! ಅದೇನೆಂದರೆ? ಶ್ಯಮಂತಕ ಮಣಿಯು ಸಿಕ್ಕನಂತರದಲ್ಲಿ ಯಾರಾದರೂ ಅದನ್ನು ಕ್ರಯಿಸುವದಕ್ಕಾಗಲಿ ಅಥವಾ ಯಾವ ರಾಜರಾಜೇಶ್ವರನಿಗಾದರೂ ಕಾಣಿಕೆಯಾಗಿ ಒಪ್ಪಿಸೆಂದು ಹೇಳುವದಕ್ಕಾಗಲಿ ನಿಮ್ಮ ಕಡೆಗೆ ಬಂದಿದ್ದರೇನು?

**ಸತ್ರಾಜಿತ** :— (ಆಲೋಚಿಸಿ) ಮಧುಕರಾ ! ಒಬ್ಬಿಬ್ಬರು ಮಾತ್ರ ಹಾಗೆ ಹೇಳಿದಂತೆ ನನಗೆ ಜ್ಞಾಪಕವಾಗುತ್ತಿದೆ.

**ಮಧುಕರ** :— ಅದಾರು ? ಹೇಳು ಕೇಳುವಾ ?

**ಸತ್ರಾಜಿತ**— ಒಂದು ಸಾರಿ ನಾರದನು ಬಂದಿದ್ದನು ಅವನು ನನ್ನ ತಮ್ಮನಾದ ಪ್ರಸೇನನಿಗೆ "ಅಯ್ಯಾ ಪ್ರಸೇನನೇ ಸೂರ್ಯನಾರಾಯಣನ ವರದಿಂದ ಸಿಕ್ಕ ಆ ಶ್ಯಮಂತಕಮಣಿಯನ್ನು ಶ್ರೀಕೃಷ್ಣರಾಜನಿಗೆ ಅರ್ಪಿಸಬಾರದೇ? ಆತನು ನಾರಾಯಣನ ಅವತಾರನು. ದುಷ್ಟನಿಗ್ರಹ ಶಿಷ್ಟಪರಿ

ಪಾಲನೆಗಾಗಿ ಅವತರಿಸಿರುವನು.'' "ಹೀಗೆ ಹಾಗೆ'' ಎಂದು ಬಹುವಾಗಿ ಕೊಂಡಾಡಿ ಅವನ್ನು ಶ್ರೀಕೃಷ್ಣಾರ್ಪಣ ಮಾಡುವವಕ್ಕೆ ಹೇಳಿದ್ದನು.

**ಮಧುಕರ** :— ಸರಿ ಹಾಗಾದರೆ! ಅದು ನಿನ್ನ ತಮ್ಮನ ಜೀವದ ಸಂಚಕಾರವನ್ನು ತಕ್ಕೊಂಡು ಶ್ರೀಕೃಷ್ಣಾರ್ಪಣವೇ ಆಗಿಹೋಗಿದೆ.

**ಸತ್ರಾಜಿ** :—ಏನು ? ಶ್ರೀಕೃಷ್ಣರಾಜನು ಅದನ್ನಪಹರಿಸಿರುವನೇ?

**ಮಧುಕ** :—ಛಿ. ಹಾಗಲ್ಲ. ಕೃಷ್ಣಾರ್ಪಣವಾಗಿದೆ ಎಂದು ಹೇಳಿದ್ದು ಕಳೆದುಹೋದ ಸಂಗತಿಯ ಅಲಂಕಾರವು.

**ಸತ್ರಾಜಿ** :—ಆಮೇಲೆ ವಿದುರನು ಒಂದುಸಲ ನಾರದನು ಹೇಳಿದಂತೆಯೇ ಹೇಳಿದ್ದನು. ಮತ್ತು ಕೆಲಕೆಲವು ವೃಷ್ಣಿ ಯಾದವ ಸರ್ದಾರರೂ ಸಹಾ ಹಾಗೆಯೇ ಹೇಳಿದ್ದರು.

**ಮಧುಕರ** :—ಏನು? ಆ ಜನಗಳೆಲ್ಲರೂ ಶ್ಯಮಂತಕ ಮಣಿಯನ್ನು ಕೃಷ್ಣಾರ್ಪಣ ಮಾಡೆಂದು ಹೇಳಿದ್ದರೆ?

**ಸತ್ರಾಜಿತ** :—ಅಹುದು ಹಾಗೆ ನನಗೆ ಜ್ಞಾಪಕವಿದೆ.

**ಮಧುಕರ** :—ಹಾಗಾದರೆ ಈ ವಿಷಯದಲ್ಲಿ ಸಂದೇಹವೇ ಬೇಡ. ಅದು ಶ್ರೀಕೃಷ್ಣಾರ್ಪಣವಾಗಿರುವದೇ ಖಂಡಿತ. ಸುಲಭೋಪಾಯದಿಂದ ಮಣಿಯು ಸ್ವಾಧೀನಕ್ಕೆ ಬಾರದಿರಲು ಕೃಷ್ಣರಾಜನು ಕೃಷ್ಣಕಾರಸ್ಥಾನದ ವಾಮಮಾರ್ಗದಿಂದಲೇ ಆ ಮಣಿಯನ್ನಪಹರಿಸಿರಬಹುದೆಂಬುದು ನನ್ನ ಸದಸದ್ವಿವೇಕ ಬುದ್ಧಿಯು ಹೇಳುತ್ತಿರುವದು.

**ಸತ್ರಾಜಿತ** :—ನಿಶ್ಚಯ. ನಿಶ್ಚಯ. ಈಗ್ಗೆ ಚನ್ನಾಗಿ ಸಂಶಯ ನಿವೃತ್ತಿಯಾಯಿತು. ನೋಡಿದಿಯಾ ಮಧುಕರಾ! ತನ್ನ ಪ್ರಜರಲ್ಲಿ ಯಾರೂ ತನಗಿಂತ ಭಾಗ್ಯವಂತರಾಗಬಾರದೆನ್ನುವದಕ್ಕಾಗಿ ಕೃಷ್ಣರಾಜನು ಹೇಗೆ ಯೋಚಿಸುತ್ತಲಿದ್ದಾನೆ. ಕೃಷ್ಣರಾಜನಿರುವತನಕ ಯಾವ ಯಾದವನಿಗೂ ಘನತೆಯನ್ನು ಹೊಂದಲಿಕ್ಕೆ ಮಾರ್ಗವಿಲ್ಲ.

## ॥ ಕಂದ ॥

॥ **ಪದ** ॥ ಪರರೋತ್ಕರ್ಷವನೋಡಲ್ |
ಹರಿಕಾನುರಿದುರಿದು ಸುಖದಿ ಘಾತವನೆಸೆದಾ|
ಸಿರಿವಂತರ ವಿಷಯದಲಾ|
ದುರುಳನಿಗಿರಾತು ಯಾರು ಯಾದವಜನರೊಳ್ |
ಅವನರಿಯನು ಸತ್ಕಾರ್ಯಗಳಾ| ಅವನಿಯೊಳೂ ಬಾಲ್ಯ
ದಿಂದ ಮಾಡುವದನನ್ಯಾ| ಕುನಿಜಾನದಲ್ಲಿ ಜನ್ಮವನಿ
ಸಿರುವಾ| ಖಳಗದಯನರಿತ್ಸುಣನ್ಸ್ಯ ಕೇಳ್ ॥ ॥ ೧ ॥

**ಮಧುಕರ** :—ಅದು ಮೊದಲೇ ಸಿದ್ಧವಾಗಿರುವದು. ನಿಜವಾಗಿ ಸತ್ರಾಜಿತನೇ! ಆ ಮಣಿಯು ಕೃಷ್ಣರಾಜರ ವಿನಃ ಬೇರೆಯಲ್ಲಿಯೂ ಹೋಗಿಲ್ಲ. ತನ್ನ ವೈಭವಕ್ಕೇನು ಕೊರತೆಯಾಗಿತ್ತೆಂದು ಆತನದನ್ನು ಅಪಹರಿಸಿರಬಹುದು ?

**ಸತ್ರಾಜಿತ** :—ಆಗಲಾಗಲಿ (ಪ್ರಕಾಶವಾಗಿ) ಬಲಭದ್ರ ಮಹಾರಾಜರ ಕಡೆಗೆ ಕೃಷ್ಣರಾಜರ ವಿರುದ್ಧ ದೂರು ಹೋಗದೇ ವಿಧಿಯಿಲ್ಲ.

**ಮಧುಕರ** :—ಹಾಗೆ ಮಾಡಿದರೇನೇ! ಕೃಷ್ಣರಾಜನಿಗೆ ಬುದ್ಧಿಯು ಬರವದು. ಇಷ್ಟು ದಿನಗಳ ತನಕ ಯಾದವರಲ್ಲಿ ಯುದುರಾಯಗಳಿದ್ದಲ್ಲಿ ವಂತೇ ಕೃಷ್ಣರಾಜರ ಕುಣಿದಾಡವು ಯಥೇಚ್ಛವಾಗಿ ನಡೆಯಿತು. ಆದರೆ ಅವರ ಕುಣಿದಾಟವು ಒಬ್ಬರ ಕೊಲೆಯನ್ನು ಮಾಡಿಸುವಮಟ್ಟಿಗೆ ಬಂದೀತೆಂದು ನಾನೆಣಿಸಿದ್ದಿಲ್ಲ.

**ಸತ್ರಾಜಿತ** :—ಮಧುಕರಾ! ತಮ್ಮನಾದ ಪ್ರಸೇನನ ಕೊಲೆಯಾಗಿರುವದೇನು ?

**ಮಧುಕರ** :—ಕೊಲೆಯಾಗದಿದ್ದರೆ ಇಷ್ಟು ದಿನಗಳಲ್ಲಿ ಅವನು ಬಾರದೇ ಇರುತ್ತಿದ್ದನೇ ?

**ಸತ್ರಾಜಿತ** :—ಅಹಾ : —ಬಂಧುವಿನ ಚಿರಕಾಲ ವಿಯೋಗವಾಗುವದೇ ?

**ಮಧುಕರ** :—ನಾನಂತೂ ಹಾಗೆಯೇ ತಿಳಿದುಕೊಂಡಿದ್ದೇನೆ.

**ಸತ್ರಾಜಿತ** :—ಇರಲಿ ಮಧುಕರಾ! ನಾಳೆಗೆ ನೀನು ಸಭೆಯಲ್ಲಿರುವೆಯಷ್ಟೆ!

**ಮಧುಕರ** :— ಇರದೇನು ?

**ಸತ್ರಾಜಿತ** :—ಒಂದುಸಾರೆ ಏನಾದದ್ದಾಗಲಿ. ಬಲಭದ್ರ ಮಹಾರಾಜರಿಗೆ ಆ ಕೃಷ್ಣರಾಜನ ಕೃಷ್ಣಕಾರಸ್ಥಾನವನ್ನು ತಿಳಿಸಿಯೇ ಬಿಡುವೆನು.

ಬಿಹಾಗ್। ತ್ರಿತಾಲ

|| **ಪದ** । ಕುಂದನಿಳಿಸುವೆ। ಮದಾಂಧಾ ಹರಿಯಾ ॥ ಪ ॥
ಈ ರೀತಿಯಾದವ। ವೀರಾಧಿವೀರಗ।
ಚೋರತನದ ಜೀವ। ಹೀರೀದ ಹರಿಯಾ ॥
ಆ ದಿವ್ಯರತ್ನವ। ಸ್ವಾಧೀನಕೊಳ್ಳುವ।
ಆ ದುಷ್ಟಬುದ್ಧಿಯ। ನಿದಾನಹರಿಯಮಾನಕುಂದನಿಳಿಸುವೆ॥

( ಈರ್ವರೂ ಹೋಗುವರು )

ಪ್ರವೇಶ ರುಕ್ಮಿಣೀ ಮಂದಿರ,

**ರುಕ್ಮಿಣಿ** :—ನಿಜವಾಗಿಯೂ ನೀವು ಚವತಿಯ ಚಂದ್ರನನ್ನು ನೋಡೀದಿರಾ ?

**ಕೃಷ್ಣ**:—ಅಹುದು ನೋಡಿದೆನು ಅದರಲ್ಲಿ ವಿಶೇಷವೇನು ?

**ರುಕ್ಮಿಣಿ**:—ಹಾಗೆ ಮಾಡಬಾರದಾಗಿತ್ತು. ಚೌತಿಯ ಚಂದ್ರನನ್ನು ನೋಡಲಾಗದೆಂದು ವೃದ್ಧರ ಅನುಭವಸಿದ್ಧವಾದ ನುಡಿಯು. ಅದಕ್ಕೆ ವಿರುದ್ಧವಾಗಿ ಆಚರಿಸಿದರ ಹಾನಿಯು ತಪ್ಪದಿರುವದೇ ?

(ತ್ರಿತಾಲ) ರಾಗ ದಕ್ಷಿಣಾದಿ ಭೈರವಿ

**ಪದ** || ಗಣರಾಜನಾ। ಅನುಶಾಸನಾ।
ಮನುಮೀರಿದೀ। ಮನಮೋಹನಾ ॥ ಪಲ್ಲ ॥
ಉಡುರಾಜನನ್ನೂ। ನೋಡಲಾಗದೆಂದೂ।
ನುಡಿದಿಲ್ಲವೇ। ಈ ದಿವಸದೀ।
ಪೂರ್ವದಿಯೊಳು। ತನ್ನ ನುಡಿಯನ್ನು ಮೀರಿ।
ನಡೆದವನುದಯಿ। ಪಡೆಯುದಿದನೆಂದೂ ॥ ೧ ॥

**ಕೃಷ್ಣ** :— ಸಖೆ ! ಹಾನಿಗಳೆಲ್ಲವೂ ವಿಧಿಯ ಸಂಕಲ್ಪಾನುಸಾರವಾಗಿ ಆಗುವವು. ಒಂದು ಸಮಯ ಚವತಿಯ ಚಂದ್ರದರ್ಶನಪ್ರಾಯಶ್ಚಿತ್ತವೆಂದು ನನಗೆ ಕಷ್ಟವು ತಪ್ಪುವದಿದ್ದರೆ ತಪ್ಪಲಿ. ಹುಟ್ಟಿಬಂದದ್ದಾದರೂ ಕಷ್ಟ.

ಸೌಖ್ಯಗಳ ಭೋಗವನ್ನು ಭೋಗಿಸುವಪಕ್ಕಲ್ಲವೇ? ಪ್ರಾಣಿಯು ಸುಖದ ಸ್ವಾರಸ್ಯವನ್ನು ಯಥೇಚ್ಛವಾಗಿ ಸವಿಯಬೇಕಾದರೆ ಕಷ್ಟಗಳ ಕಟುತರ ಪಾಪ ಭೋಗಗಳನ್ನು ಅನುಭವಿಸಲೇ ಬೇಕು. ಸದಾ ಸೌಖ್ಯದಲ್ಲಿರು ಪದೂ ಒಂದು ಬಗೆಯ ಬೇಸರವಲ್ಲವೇ?

**ರುಕ್ಮಿಣಿ**:—ಏನೂ? ಯಾವಾಗಲೂ ಸುಖ ಪಡುವದು ಬೇಸರವಾಗುವದೆ.

**ಕೃಷ್ಣ**:—ಬಹು ರುಚಿಕರವಾದ ಪದಾರ್ಥವೆಂದು ಯಾವಾಗಲೂ ಅದನ್ನೇ ಸೇವಿಸುತ್ತ ಹೋದರೆ ಹೇಗೆ ಹೇಸಿಕೆಯಾಗಿ ಬೇಸರವಾಗುವದೋ? ಹಾಗೆಯೇ ಸತತವಾಗಿ ಅನುಭವಿಸುವ ಸೌಖ್ಯವಾದರೂ ಬೇಸರವಾಗು ವದು.

**ರುಕ್ಮಿಣಿ**:—ಹಾಗಿದ್ದರೆ! ಕಷ್ಟದಲ್ಲಿರುವವರು ಸುಖವನ್ನಪೇಕ್ಷಿಸುವಂತೆ ಸುಖದಲ್ಲಿರುವವರು ಕಷ್ಟವನ್ನಪೇಕ್ಷಿಸುವದನ್ನು ಎಂದೂ ಯಾರೂ ಕೇಳಿಲ್ಲ ಮತ್ತು ಕಂಡಿಲ್ಲ.

**ಕೃಷ್ಣ**:—ತೋರಿಕೆಯಲ್ಲಿ ಹಾಗೆ ಅಪೇಕ್ಷಿಸದಿದ್ದರೂ ಕಷ್ಟಗಳನ್ನು ತಂದು ಕೊಳ್ಳುವ ಕೃತಿಯನ್ನು ಮಾತ್ರ ಅವರು ಸದಾ ಮಾಡುತ್ತಿರುತ್ತಾರೆ.

**ರುಕ್ಮಿಣಿ**:— ಉದಾಹರಣೆಯನ್ನು ತೋರಿಸಿದರೆ ಮಾತ್ರ ಒಪ್ಪಿಕೊಳ್ಳ ಬಹುದು.

**ಕೃಷ್ಣ**:— ಉದಾಹರಣೆಗಳೊ? ಎಷ್ಟು! ಬೇಕು. ಈ ನಮ್ಮ ದ್ವಾರಕೆ ಯಲ್ಲಿ ಸುರಲೋಕ ಸೌಖ್ಯಗಳಿಂದ ಸಮೃದ್ಧವಾದ ನಮ್ಮ ದ್ವಾರಕೆಯಲ್ಲಿ ಮನೆ ಮನೆಗೂ ಆ ಬಗೆಯ ಉದಾಹರಣೆಗಳು ಸಿಕ್ಕುತ್ತವೆ.

**ರುಕ್ಮಿಣಿ**:—ಏನು? ನಮ್ಮ ದ್ವಾರಕೆಯಲ್ಲಿ ಅಂತಹ ಪ್ರತಿಗಾಮಿ ವಿಚಾರಿ ಗಳಿರುವರೇ?

**ಕೃಷ್ಣ**:—ನೋಡು! ಪೂರ್ವದಲ್ಲಿ ಅಂದರೆ ಬಡತನದಲ್ಲಿರುವಾಗ್ಗೆ ಅವರ ನೀತಿ ನಡಾವಳಿಗಳು ಹೇಗೆ ಇದ್ದವು? ಈಗ್ಗೆ ಹೇಗಿವೆ? ಬಡತನದಲ್ಲಿ ಗೋವುಗಳನ್ನು ಕಾದುಕೊಂಡು ಸಮೃದ್ಧವಾದ ದುಗ್ಧಪ್ರಾಶನವನ್ನು ಮಾಡಿ ಬಲಶಾಲಿಗಳಾಗುತ್ತಿದ್ದ ಯಾದವರು ಈಗ್ಗೆ ಯಥೇಚ್ಛವಾಗಿ

ಸುರಾಪಾನವನ್ನು ಮಾಡಿ ದುರ್ಬಲರಾಗುತ್ತ ನಡೆದಿಲ್ಲವೇ? ಪೂರ್ವದಲ್ಲಿ ವಿನಯಭಾವದಿಂದ ಒಪ್ಪುತ್ತಿದ್ದ ಯಾದವರು ಈಗ್ಗೆ ಉನ್ಮತ್ತರಾಗಿ ವರ್ತಿಸುವದು ನಿತ್ಯದಲ್ಲೂ ನಮ್ಮ ನಿದರ್ಶನಕ್ಕೆ ಒರುವದಿಲ್ಲವೇ? ಪೂರ್ವದಲ್ಲಿ ದೇವಧರ್ಮಾದಿಗಳಲ್ಲಿ ಆಸ್ತಿಕ್ಯಭಾವವುಳ್ಳವರಾದ ಯಾದವರ ಈಗ್ಗೆ ನಾಸ್ತಿಕಶಿರೋಮಣಿಗಳಾಗಿ ಮೆರೆಯುವವನ್ನು ನಾವು ನೋಡುವದಿಲ್ಲವೇ?

**ರುಕ್ಮಿಣಿ** :—ಇದರ ಪರಿಣಾಮವು ಏನಾಗುವದೆಂದು ತಾವು ಭಾವಿಸುವಿರಿ?

**ಕೃಷ್ಣ** :—ಆಗುವದೇನು ಯಾದವರ ಅಧಃಪಾತವು!

ರಾಗ ಬಿಲ್ಹಾರಿ ಆದಿತಾಳ

(ದ-ನವನಿಪ)

॥ **ಪದ** ॥ ಬೋಧಿಸುವೆನು । ಈ ದುರ್ದಶೆಗಳ । ಯಾದವರಧಃಪಾತ! ಪಲ್ಲ ॥
ಸುದತಿಯೇ ಮದಭಿಪ್ರಾಯವಿದೇ ನಿಜ
ಸುರಾಪಾನಪಟುಗಳಾಗಿ । ಧರೆಯೊಳು ಬಾಳುವರು ।
ನರರೇ! ನಾಶವಗೈವರು । ಮಾನವಧರ್ಮವಾ ।
ಘೋರನರಕವಾಸೇರುವಂಥ । ಕುವಿ । ಚಾರಗಳ । ಒತ್ತ
ಕಾರಿಗಳೆನಿಸರು ॥ ೧
ಮಲಿನನಾದುದಕೆಮತಿಯು ।
ಬಲಜನರು ಸಲ್ಲದಾ । ಕಲಹದಲ್ಲಿ ಕಾಲನುಕಳೆಯು ।
ತಲೆಸರ್ವದಾ । ಕಲಿಪುರುಷನ ಸಹಕಾರಿಗಳಾಗಿ ।
ಛಲನೆಮಾಡುವ ಸಾಧುವ್ಯಂಪದಾ ॥ ೨ ॥
ದೇವದೇವ । ಧರ್ಮಾದಿಗಳೋಳ್ಸುಗ । ತನ್ನಯಾ । ಯಾವಕಾರ್ಯ ।
ಎಂದರಿತುಕೊಳ್ಳರು ನಿರ್ದಯಾ । ಈ ವಸುಧೆಗೆಬಹು ।
ಭಾರವಾಗಿಹಾ । ಜೀವಿಸುವನ, ಧಿಕ್ಕಾರಜನ್ಮವೂ ೩ ॥

**ರುಕ್ಮಿಣಿ** :—ಅಮ್ಮಮ್ಮಾ ಸರ್ವನಾಶದ ಸಮಯವು ಒದಗುವದೇ?

**ಕೃಷ್ಣ** :—ಹಾಗಾಗುವದು ನಿಶ್ಚಯವೆಂದು ನನ್ನ ತರ್ಕವಿದೆ. (ವಿಜಯನು ಬಾಯಿ ಸವರುತ್ತಾ ಬರುವನು) ಅವನನ್ನು ನೋಡಿ) ಏನು ವಿಜಯಾ! ಉಪಹಾರವನ್ನು ತೀರಿಸಿಕೊಂಡೆಯಾ?

**ವಿಜಯ** :—ಕೃಷ್ಣಯ್ಯಾ! ಯಥೇಚ್ಛವಾಗಿ ತೃಪ್ತಿಯಾಯಿತು.

**ರುಕ್ಮಿಣಿ** :—ವಿಜಯಾ! ಯಥೇಚ್ಛವಾಗಿ ಮೋದಕಗಳನ್ನು ತಿಂದಿದ್ದಕ್ಕೆ ವಿಚಾರಗಳು ಕೆಳಗಾಗಿ ಮೋದಕಗಳು ಮೇಲಾದಂತೆ ಕಾಣುತ್ತವೆ.

**ವಿಜಯ** :—ಅದೇಕೆ? ಅಮ್ಮನವರೇ!

**ರುಕ್ಮಿಣಿ** :—ಬರುತ್ತಲೇ ನೀನು ಪ್ರಾಣೇಶ್ವರನಿಗೇನೆಂದು ಸಂಬೋಧಿಸಿದೆ?

**ವಿಜಯ** :— ಯಾರಿಗೆ? ಕೃಷ್ಣಯ್ಯನಿಗೆ?

**ರುಕ್ಮಿಣಿ** :—ಮತ್ತೂ ಅದೇ ಸಮಾಚಾರವೇ? ಭಾವನವರ ನಿರ್ಬಂಧವು ಮರೆತುಹೋಯಿತೇ ನೋಡು ಇಲ್ಲಿ ಹೇಳಿದಂತೆ ಥಕ್ಕನೇ ಆಸ್ಥಾನದಲ್ಲಿ ಹೀಗೆ ಹೇಳಿದುದಾದರೆ ಖಂಡಿತವಾಗಿ ಸಂಕಟಕ್ಕೆ ಗುರಿಯಾಗುವಿ. ಜೋಕೆ.

**ವಿಜಯ** :—ಅಂಥಾದ್ದೇನು ಪ್ರಮಾದವನ್ನು ಮಾಡಿದೆನು? ಅಮ್ಮನವರೇ! ನಮ್ಮ ಕೃಷ್ಣಯ್ಯನ ವಿಷಯದಲ್ಲಿ..... .... .... ....

**ರುಕ್ಮಿಣಿ**:—ಪುನಃ ಅದೇ ಮಾತೆ! ಏನಿದು? ಹಾಗೆ ಯುವರಾಜ ಪದದಲ್ಲಿರುವವರಿಗೆ ಏಕವಚನದಿಂದ ಸಂಬೋಧಿಸಿದರೆ?

**ವಿಜಯ** :—ಅಯ್ಯೋ? ನೆನಪಾಯಿತು. ನನ್ನ ಪರಮ ಮಿತ್ರನಾದ ಕೃಷ್ಣಯ್ಯನಿಗೆ ಬಲರಾಮಣ್ಣನು ಕೃಷ್ಣರಾಜನೆಂದು. .... .... .... ....

**ರುಕ್ಮಿಣಿ** :— ಛಿ. ಮಂಕುಮತಿಯೇ! ಹೆಚ್ಚೆಚ್ಚು ಎಡವುತ್ತ ನಡದಿ ಎಲೋ ಈಗ್ಗೆ ನೀನೆಲ್ಲಿರುವೆ?

**ವಿಜಯ** : —ಅದೇನು ಅಮ್ಮನವರೇ ಹೀಗೆ ಕೇಳುವಿರಿ? ಈಗ್ಗೆ ನಾನು ದ್ವಾರಕೆಯಲ್ಲಿರುವೆನು. ಅಲ್ಲವೇ?

**ಕೃಷ್ಣ** :—ಅನರ್ಥಕ್ಕೆ ನಿಂತಿತು. ವಿಜಯನ ಸಲುವಾಗಿ ಭೂತವು ವರ್ತಮಾನವಾಗಬೇಕಾಯಿತು. ವಿಜಯಾ? ಸ್ವಲ್ಪ ಸಮಾಧಾನದಿಂದ ಕುಳಿತುಕೊಂಡು ತಾಂಬೂಲವನ್ನು ಸ್ವೀಕರಿಸು. ಆಮೇಲೆ ನಿಮ್ಮಾ ನಿಮ್ಮ ಪ್ರಶ್ನೋತ್ತರಗಳು ಜರಗಲಿ.

**ರುಕ್ಮಿಣಿ** :—ಇದೋ ತೆಗೆದುಕೊ ತಾಂಬೂಲವನ್ನು (ತಬಕವನ್ನು ವಿಜಯನ ಮುಂದಿಡುವಳು)

**ವಿಜಯ** :— (ತಾಂಬೂಲವನ್ನು ಸ್ವೀಕರಿಸುತ್ತ) ಅಯ್ಯಯ್ಯೋ? ಈ ತಬಕದೊಳಗಿನ ಯಾದವರಾಸ್ಥಾನದಲ್ಲಿ ಶ್ರೀಕೃಷ್ಣ ಬಲರಾಮ ಮಹಾರಾಜರು ಸಿಂಹಾಸನಾಶೀನರಾಗಿ ಇರುವುದನ್ನು ನೋಡಿ ಇಷ್ಟು ಹೊತ್ತಿನ ತನಕ ನಾನು ಬುಡಮೇಲಾಗಿ ನಿಂತದ್ದು ಚೆನ್ನಾಗಿ ಅರುವಾಯಿತು. ಶ್ರೀಕೃಷ್ಣ ಮಹಾರಾಜರೆ! ತಪ್ಪಾಯಿತು. ಇಷ್ಟು ಹೊತ್ತಿನ ತನಕ ಮರ್ಯಾದೆಯನ್ನು ಬಿಟ್ಟು ತಮ್ಮ ಗೂಡ ವರ್ತಿಸಿದೆನು ಕ್ಷಮಿಸಿರಿ. ಬಾಲ್ಯದಾರಭ್ಯ ರೂಢಿಯಾಗಿದ್ದ ಸಂಗತಿಗಳೇ! ಪ್ರಸಂಗಾನುಸಾರ ಫಕ್ಕನೇ ತಲೆದೋರುತ್ತವೆ. ಇಲ್ಲಿ ತಪ್ಪಿದಂತೆ ಬಲಭದ್ರಮಹಾರಾಜರ ಸಮ್ಮುಖವಲ್ಲಿ ತಪ್ಪುಗಳಾಗಿದ್ದರೇ! ಇಷ್ಟು ಹೊತ್ತಿನಲ್ಲಿ ಈ ವಿಜಯನ ಅವಸ್ಥೆಯು ಏನಾಗುತ್ತಿತ್ತೋ ಕಾಣೆ ಬೇಡ ಬೇಡ ನನಗೆ ಈ ರಾಜಸ್ಥಾನದಲ್ಲಿರುವುದೇ ಬೇಡ ಹಳ್ಳಿಗಾಡವಾದ ಗೋಕುಲದಲ್ಲಿಯೇ ಇದ್ದು ಸುಖವಾಗಿ ಕಾಲಹರಣ ಮಾಡುವೆನು.

**ಕೃಷ್ಣ** :—ವಿಜಯಾ! ಹೀಗೆ ಉದಾಸೀನನಾಗಬೇಡ ಆ ಗೋಕುಲದಲ್ಲೇನಿರುವದೆಂದು ನೀನು ಅಲ್ಲಿ ಹೋಗಿರಲಪೇಕ್ಷಿಸುವಿ?

**ವಿಜಯ** :—ಶ್ರೀಕೃಷ್ಣರಾಜರೇ! ಅಲ್ಲಿ ನನ್ನ ಬಾಲ್ಯದ ಜೀವದ ಜತೆಗಾರನಾದ ಬಾಲಕೃಷ್ಣಯ್ಯನು ಆಟಗಳನ್ನಾಡಿದ ಸ್ಥಳಗಳಿಲ್ಲವೆ? ಗೋಪಿಯರೊಡನೆ ವಿನೋದವಾಡಿದ ಕುಂಜವನವಿಲ್ಲವೇ? ಹುಡುಗರಗೂಡ ಹುಡದೆಯನ್ನಾಡಿದ ಯಮುನೆಯ ಉಸುಬಿನ ರಾಶಿಯಿಲ್ಲವೇ?

**ಕೃಷ್ಣ** :—ಇದ್ದರೆ ಅವುಗಳಿಂದೇನುಪ್ರಯೋಜನ?

**ವಿಜಯ** :—ಏಕೆ? ಪ್ರಯೋಜನವಿಲ್ಲ.

ಭೂಪ ಕಲ್ಯಾಣಿ ತಾಳ ದೀಪಚಂಪಿ

|| **ಪದ** || ಧ್ಯಾನವ ಮಾಡುವೆ । ಆ ನನ್ನ ಗೋಪಿಯು ॥ ಪ್ರಾಣಪದಕ । ಬಾಲ
ಗೋಪಾಲನಾ ॥ ಪ ॥
ಕಾನನಮಧ್ಯದಿ । ಧೇನುಗಳನು ಕಾಯ್ದು ।
ಗಾನವ ಮಾಡುವ । ಆನಂದಮೂರ್ತಿಯಾ ।
ಸುಳಿದಿಹ ಯಮುನೆಯ ಮಳಲೀನರಾಶಿಯೊಳ್ ।

ಗೆಳೆಯರೊಡನೆ ಆಟಂಗಳನಾಡುವಾ ॥ ೧ ॥
ಕೊಳಲನ್ನು ಬಾರಿಸಿ । ಇಳೆಯ ಚಿತ್ತವನೆಲ್ಲ ।
ಸೆಳೆಯುವ ಸಂಗೀತದಳವಿನ ಸುಖದ ।
ಸುಳಿಯೊಳ್ ಮುಳುಗಿಸಿ ಬಿಡುವಾ ।
ನಡುನಡುವೆ ಕಿಲುಕಿಲು । ನಗುತೆಯರಗಿಳಿ ।
ಯಂದದಿ ನುಡಿವಾ । ಸುಧೆಯನ್ನು ಗೆಲಿವಾ ।
ಸವಿನುಡಿಗಳಿಂದೆಲ್ಲ ಗೆಳೆಯರ ॥ ಇಳೆಯ ಭಾವನೆ ।
ಗಳನು ತಪ್ಪಿಸಿ । ಗಳಿಲನೇ ಸ್ವಾನಂದ ಕೆಳೆಯುವ ।
ನೀಲಮೇಘಶ್ಯಾಮಮೂರ್ತಿಯ ॥ ೨ ॥
ಮಧುವನದೊಳು ಗೊಲ್ಲ । ಸುದತೀಯರೊಡುಗೂಡಿ ।
ವಿಧ ವಿಧ ನಿರ್ಮಲ ಸುವಿನೋದವಾ ।
ಹದವಿಂದ ಗೈಯ್ಯುವ । ಚದುರ ಚನ್ನಿಗ ತಾನೂ ।
ಬಂಧುರೊಳೂ । ಬಾಸ್ತಿಯ ನುಡಿಯಾಡುವಾ ।
ಸುಪವೇರಿ । ವೈರಭಾವದಿ ಬಂದರಕ್ಕಸಖಲರನ್ನೂ
ಅದುಭೂತ । ಶೌರ್ಯದಿ ಮರ್ದಿಸಿದ । ಶಾರ್ದೂಲಕಿಶು ।
ವನ್ನೂ । ಗದ್ಗದ ಸಿನಾದದಿ । ಕರೆಯುತಿರಲೂ ।
ಬಗುವ ಸೊಗನ್ನೂ । ಮನದಲ್ಲಿ ಯೋಚಿಸಿ ।
ಮಧುವನಾಗಿಹನಾಂ ಕಳೆವೆ ಸಗ್ಗದ । ಸಮಾನದ ।
ಜನ್ಮಭುವಿಯೊಳ್ । ಅದರೊಳೆನಗಾನಂದಲೀ ಗಿನ
ಪದವಿಯೂ । ಸಾಕಾಯಿತಯ್ಯಾ ॥ ೩ ॥

ಆಯಾ ಸ್ಥಳಗಳಲ್ಲಿ ನಾನು ತಿರುಗಾಡುವಾಗ್ಗೆ ಅಲ್ಲಲ್ಲಿ ನನ್ನ ಬಾಲಕೃಷ್ಣನು ಮಾಡಿದ ಲೀಲೆಗಳು ನನ್ನ ಕಣ್ಣೆದುರಿನಲ್ಲಿ ನಿಲ್ಲಲಿಕ್ಕಿಲ್ಲವೇ? ಅಗ್ಗೆ ಅದೇ ಆನಂದಾನುಭವವನ್ನು ಮಾಡುತ್ತಲೇ! ಶೇಷಾಯುಷ್ಯವನ್ನು ಕಳೆದುಬಿಡುವೆನು ಅಸ್ವಾರಸ್ಯವಾಗಿಯೂ ಅಸಿಧಾರಾವ್ರತರಾಗಿಯೂ ಮತ್ತು ಅಡಿಗಡಿಗೆ ಕಡುತಾಪದಾಯಕವಾದ ಈ ಕೃಷ್ಣ—ಬಲರಾಮ ಮಹಾರಾಜರ ಅರಮನೆಯ ನಿವಾಸವು ನನಗೆ ಬೇಡವೇ ಬೇಡ.

**ಕೃಷ್ಣ**:—ನಾನು ನಿನ್ನನ್ನು ಬಿಟ್ಟಿರಲ್ಲವೇ? ನೀನು ಗೋಕುಲಕ್ಕೆ ಹೋಗು ವದು.

**ವಿಜಯ** :—ಹಾಗೆ ನೀವು ನಿರ್ಬಂಧ ಪಡಿಸಿದರೆ ನಿಮಗೆ ಹೇಳದೇ ಕೇಳದೇ ಕಾಲಿಗೆ ಬುದ್ಧಿಯನ್ನು ಹೇಳುವ ಪ್ರಸಂಗವು ಬರುವದು.

**ರುಕ್ಮಿಣಿ** :—ವಿಜಯಾ! ಅಂತಹ ಸಾಹಸವನ್ನು ಮಾತ್ರ ಮಾಡಬೇಡಾ! ನೀನು ಕಣ್ಣುಮರೆಯಾದೆಯೆಂದರೆ ಪ್ರಾಣನಾಥನ ಪಾಲಿಗೆ ಸಕಲ ಭೋಗಭಾಗ್ಯಗಳೂ ಶುಷ್ಕವಾಗಿ ತೋರುವುವು ಯಾಕೆಂದರೆ?

ಸಾರಂಗ ತಾಲ ಧುಮಾಳಿ

|| **ಪದ** ||| ಜೀವದ ಜತೆಗಾರ ! ನೀ | ನಿವರಿಗೆ ವಿಜಯಾ || ಪಲ್ಲ ||

ಜೀವದ ಜತೆಗಾರನು ! ನೀ | ನೆನ್ನಯ | ಜೀವನೇಶನಿಗೆ |
ನಿತುಲೋ | ಕದಿಜೀವದೇಹಗಳ ಸಾಮರಸ್ಯವು |
ಆ ವಿಧದಿರಲೀತೆರದಿನುಡಿವರೆ ||೧||
ಯೋಚಿಸಬೇಡಲವೊ | ನಮ್ಮೆಲ್ಲರನಗಲಿರುವಾ |
ಲೋಚನೆ ನಿಷ್ಫಲವೊ |
ಸಮ್ಮತಿಸೆನು | ಸರಿಯುಹುದೇ | ಸೂಚಿಸುವಾಫಲವೊ ? |
ತೋಚದಿರಬಹುದು ನಿನಗರಮನೆಯಾ | ಆಚರಣೆ
ಗಳೋಯೆಂದಮಾತ್ರಕೆ | ಯೋಚಿಸಬಹುದೇ |
ಸನ್ಮಿತ್ರರಿಗೆ | ಸೂಚಿಸಿದಲೇ | ಗೋಕುಲಕೆ ತೆರಳುವದು |
ನಡೆಯುಕ್ಕೆ ಬಾರದರುಣನ | ಬಿಡಲಾಪನೆ | ಲೋಕ |
ವೆಲ್ಲ ಬೆಳಗುವವರವಿಯಾ | ಜಡಮತಿಯು ವಿಜಯನೆಂ |
ದೂ | ಬಿಡಲಾಪನೆ | ಬಾಲಸಖನಯದುಕುಲತಿಲಕಾ |

**ವಿಜಯ** :—ಬಹೂ ತೊಂದರೆ?

**ಕೃಷ್ಣ** :—ವಿಜಯಾ! ದರ್ಬಾರದ ಮಟ್ಟಿಗೆ ಒಲರಾಮ ಮಹಾರಾಜರ ನಿರ್ಬಂಧಗಳನ್ನು ಪಾಲಿಸಿ ಮಿಕ್ಕ ಸ್ಥಳದಲ್ಲಿ ನೀನು ನನ್ನಗೂಡ ಮೊದಲಿನಂತೆಯೇ ವರ್ತಿಸು. ಇನ್ನುಮೇಲಾದರೂ ಸಮಾಧಾನವೋ?

**ವಿಜಯ** :—ರಾಜಸ್ಥಾನದ ಸಭಾಸದರೊಳಗಿಂದ ನನ್ನ ಹೆಸರನ್ನು ಕಿತ್ತು ಹಾಕಿಸಿದೆಯಾದರೆ ಸುಖವಾಗಿ ದ್ವಾರಕೆಯಲ್ಲಿದ್ದು ಬಿಡುವೆನು.

**ಕೃಷ್ಣ** :—ಹಾಗೆ ಮಾಡಲಿಕ್ಕೆ ಬರುವಂತಿಲ್ಲ ನೀನು ನನ್ನ ಪರಮ ಮಿತ್ರನು ಸುಖದುಃಖಾದಿಗಳಲ್ಲಿಯೂ ನನ್ನ ಪ್ರತಿಚ್ಛಾಯೆದಂತೆ ಸಂಗಡವಿದ್ದವನು! ಇಂಥ ನಿನ್ನನ್ನು ನನ್ನ ಉತ್ಕರ್ಷಕಾಲದಲ್ಲಿ ಬಿಟ್ಟಿರುವದಾದೀತೇ?

**ವಿಜಯ**:—ನಿನ್ನ ದೇನೋ ಉತ್ಕರ್ಷವು ಆದರೆ ಸ್ವೇಚ್ಛಾಚಾರಿಯಾದ ನನಗೆ ಕೈಕಟ್ಟಿಕೊಂಡು ಸೂಜಿಯ ಕೊನೆಯುಲ್ಲಿ ನಿಂತುಕೊಂಡಿರುವದು ಮಾತ್ರ ಅಪಕರ್ಷಕಾಲವೇ ಸರಿ.

**ರುಕ್ಮಿಣಿ** :—ವಿಜಯಾ? ಪ್ರೌಢಾವಸ್ಥೆಯಲ್ಲಿಯೂ ಕೂಡಾ ಬಾಲ್ಯದಂತೆ ವರ್ತಿಸುವದು ವಿಹಿತವಾದೀತೇ? ಎಲೋ ವಯಪರತ್ವೇನ ವಿಚಾರಾಚಾರೋಚ್ಚಾರಗಳಲ್ಲಿ ತಿಳಿದವರು ವ್ಯತ್ಯಾಸವನ್ನು ಮಾಡಿಕೊಳ್ಳಬೇಬೇಕು.

**ವಿಜಯ** :—ಆಗಲಿ ತಾಯೀ! ನಿಮ್ಮಿರ್ವರ ಅಭಿಪ್ರಾಯದಂತೆ ವರ್ತಿಸುವೆನು.

**ಕೃಷ್ಣ** :—ಅಸ್ತು ವಿಜಯಾ! ರಾತ್ರಿಯು ಬಹಳವಾಯಿತು ನೀನಿನ್ನು ನಿನ್ನ ಮನೆಗೆ ನಡೆ.

**ವಿಜಯ** :—ಆಗಲಿ ಹೋಗುವೆನು. (ಹೋಗಿಬಂದು) ಅಮ್ಮನವರೇ! ಈ ದಿನ ಕೃಷ್ಣಯ್ಯನವರು. ... .... .... .... ....

**ರುಕ್ಮಿಣಿ**:—ಹಾಂ ಹೀಗೆ ಉಚ್ಚಾರದಲ್ಲಿ ಬದಲಾವಣೆಯನ್ನು ಮಾಡಿಕೊ? ಈಗ್ಗೆ ಇವರಿಗೆ ಹೇಗೆ ಸಂಬೋಧಿಸಿದೆ?

**ವಿಜಯ** :—ಕೃಷ್ಣಯ್ಯನವರೆಂದು.

**ರುಕ್ಮಿಣಿ** :—ನೋಡಿದಿಯಾ? ಬಹುಮಾನಕ್ಕೆ ಬಹುಮಾನವಾಯಿತು, ಮತ್ತು ನಿನ್ನ ಮನಸ್ಸಿನ ಪ್ರೀತಿಯೂ ಸಹ ತೀರಿತು.

**ವಿಜಯ** :—ಹಾಗಾದದ್ದು ನಿಜ.

(ಆಲೋಚಿಸಿ) ಏನು ಹೇಳಬೇಕೆಂದಿದ್ದೆನು .... .... .... .... ಹಾಂ ನೆನಪಾಯಿತು. ಅಮ್ಮನವರೇ! ಚವತಿಯ ಚಂದ್ರನನ್ನು ಕೃಷ್ಣಯ್ಯ

ನವರು ತಾವು ನೋಡುವದಲ್ಲದೇ ನನಗೂ ಕೂಡಾ ತೋರಿಸಿಬಿಟ್ಟರು. ಇನ್ನು ಮುಂದೆ ಯಾವ ಸಂಕಟಗಳು ಬರುವವೊ? ಎಂದು ಮನವು ವ್ಯಾಕುಲಪಡುತ್ತಲಿದೆ.

**ಕೃಷ್ಣ** :—ಇರಲಿ. ಹೋಗೋ ಬಂದಾಗ್ಗ ನೋಡಿಕೊಳ್ಳುವಾ! ವೃಥಾ ಸಂಶಯ ಪಿಶಾಚಿಯನ್ನು ಏತಕ್ಕೆ ತಗಲಿಸಿಕೊಳ್ಳುವೆ? ಸ್ವಸ್ಥವಾಗಿ ನಿದ್ರಿಸು ಹೋಗು. ಒಂದು ಸಮಯ ಸಂಕಟಗಳು ಬಂದರೆ ನಮ್ಮಿಬ್ಬರ ಮೇಲೂ ಬರುವವಲ್ಲವೇ? ಅರ್ಥಾತ್ ಸಂಕಟದಲ್ಲಿ ಕೂಡಾ ನಾನು ನಿನ್ನ ಸಹಚಾರಿಯಾಗಿರುವಾಗ್ಗ ಭಯ ಪಡುವದೇಕೆ? ಹೋಗ ಹೋಗು? ಯಾವ ವಿಚಾರವನ್ನೂ ಮಾಡದೇ ಸುಖವಾಗಿ ಮಲಗಿ ನಿದ್ರಿಸು. ನಾವಾದರೂ ವಿಶ್ರಾಂತಿಯನ್ನು ಕೊಳ್ಳುವೆವು.

( ಪ್ರವೇಶ )

**ಕಂಚುಕಿ** :—ಏನಿದಾಶ್ಚರ್ಯ? ದರ್ಬಾರವು ಸೇರುವವಕ್ಕೆ ಇನ್ನು ಎಷ್ಟೋ ಅವಕಾಶವಿದೆ. ಈಗಾಗಲೇ ಸತ್ರಾಜಿತ ಸರ್ದಾರರು ಬಂದುಬಿಟ್ಟಿದ್ದಾರೆ ನಿತ್ಯಶಃ ಎಲ್ಲರಿಗಿಂತಲೂ ಹಿಂದಿನಿಂದ ಬರತಕ್ಕವರು ಇಂದು ಮುಂಚಿತ ವಾಗಿಯೇ ಬಂದಿರುವರೆಂದಬಳಿಕ ಏನಾದರೂ ವಿಶೇಷವಿರಬಹುದು. ಇವರ ತಮ್ಮಂದಿರಾದ ಪ್ರಸೇನ ಸರ್ದಾರರಿಗೆ ಅದಾವದೋ ಒಂದು ಎಂಭತ್ತು ಭಾರ ಸುವರ್ಣವನ್ನು ಕೊಡುವ ಮಣಿಯು ದೊರೆತಾಗಿನಿಂ ದಂತೂ ಇವರಿಗೆ ಯಾರ ಪರವೆಯೂ ಉಳಿದಿಲ್ಲ. ಪ್ರಸಂಗಾನುಸಾರ ಬಲಭದ್ರ ಮಹಾರಾಜರಿಗೆ ಎದುತ್ತರವನ್ನು ಕೊಟ್ಟಿದ್ದು ಒಂದೆರಡು ಸಾರೆ ನಾನೇ ನೋಡಿದ್ದೇನೆ..... .... ಸಿರಿಯು ಹೆಚ್ಚಿದರೇನಾಯಿತು? ದೊರೆಗಳಾಗಬಲ್ಲರೇ. "ಕೋಣವು ಬೆಳೆದರೆ ಆನೆಯಾದೀತೇ?"

**ಮಧುಕರ** :—(ಬಂದು) ಏನು? ಕಂಚುಕಿ! ಸಭೆಯಲ್ಲಿ ಸರ್ದಾರರಾರಾದರೂ ಬಂದಿರುವರೇ?

**ಕಂಚುಕಿ** :—ಸತ್ರಾಜಿತ ಸರ್ದಾರರು ಮಾತ್ರ ಬಂದಿದ್ದಾರೆ ಒಬ್ಬ.

**ಮಧುಕರ** :—ಏನು ಅವರು ಇಷ್ಟು ತೀವ್ರವಾಗಿ ಬಂದಿರುವರೇ?

**ಕಂಚುಕಿ**:—ಅಹುದು ಬುದ್ಧಿ. ತಮ್ಮ ಸ್ಥಾನದಲ್ಲಿ ಕುಳಿತುಕೊಂಡಿದ್ದಾರೆ ನೋಡಿ (ಮಧುಕರನು ಹೋಗುವನು) ಈ ಮಧುಕರ ಸರ್ದಾರರಿಗೇನಾಗಿರುವದೊ? ಏನೋ? ಯಾವಾಗಲೂ ಅರಮನೆಯ ಜನಗಳನ್ನೇ ಆಡಿಕೊಳ್ಳುತ್ತಿರುತ್ತಾರೆ. ಆದರಲ್ಲಿ ಶ್ರೀಕೃಷ್ಣ ಮಹಾರಾಜರ ಮೇಲಂತೂ ಒಳಿತಾದ ವಕ್ರದೃಷ್ಟಿಯನ್ನಿಟ್ಟಿದ್ದಾರೆ. ಇವರಂತೆಯೇ ತುಸು ಹೆಚ್ಚು ಕಡಿಮೆ ಪ್ರತಿಯೊಬ್ಬ ಯಾದವ ಸರ್ದಾರರ ಅವಸ್ಥೆಯಾಗಿದೆ. ಮುಂದಾಳುತನವನ್ನು ವಹಿಸಿ ಕಾಲಕಾಲಕ್ಕೆ ಆಹಾರ ನಿದ್ರಾದಿಗಳಿಲ್ಲದೇ ಹಗಲಾವುದೋ ರಾತ್ರಿಯಾವುದೋ ಎನ್ನುವದನ್ನು ಲಕ್ಷಿಸದೇ ಬುದ್ಧಿ, ಶಕ್ತಿ, ಪರಾಕ್ರಮಗಳಿಂದ ಸಂಕಟ ಪರಂಪರಗಳಿಗೆದೆಗೊಟ್ಟು ದ್ವಾರಕೆಯ ಸಾಮ್ರಾಜ್ಯವನ್ನು ಸ್ಥಾಪಿಸಿ ಅದನ್ನು ವೈಭವ ಶಿಖರಕ್ಕೆ ಒಯ್ದು ಮುಟ್ಟಿಸುವ ತನಕ ಶ್ರೀಕೃಷ್ಣ ಮಹಾರಾಜರು ಅವತಾರಿಗಳೆಂತಲೂ ಅಮಾನುಷಕೋಟಿಯವರೆಂತಲೂ ಹೊಗಳಿಸಿಕೊಳ್ಳುತ್ತಿದ್ದರು. ಈಗ್ಗೆ ಕಾರ್ಯಸಾಧನಾನಂತರದಲ್ಲಿ ಅವರೇ ನಿಂದಕರ ಬೊಗಳುವಿಕೆಗೆ ಪಾತ್ರರಾಗಿದ್ದಾರೆ. ಇವೇನು ಶುಭನಾವ ಲಕ್ಷಣವಲ್ಲ ಶ್ರೀಕೃಷ್ಣಮಹಾರಾಜರು ನಮ್ಮ ಯಾದವಕುಲದಲ್ಲಿ ಹುಟ್ಟದಿದ್ದರೆ ದನಕರುಗಳನ್ನು ಕಾಯ್ದುಕೊಂಡು ವನ ವನ ತಿರುಗುವ ನಮ್ಮ ಪಾಡು ದೂರಾಗುತ್ತಿತ್ತೇ? ಕಾಲವೇ ಹೀಗಿದೆ. ಉಪಕಾರವನ್ನು ಮಾಡಿದವರೇ ಅಪಕಾರವನ್ನು ನೆನೆಯುವ ಈ ಜನಕ್ಕೇನನ್ನಬೇಕು?

**ಕಂದ**

ಬಿಸಿಲೊಳಗೆಬಿದ್ದ ಮೊಸಳೆಯನು। ಅಸುವಳಿಯುವ ಹಾಗೆ
ತಂದು ನೀರೊಳು ಬಿಡಲಾ। ಮುಸಳೆ ಮುಳುಗವನನುಂಗಿತ।
ಪಿಸುಣಂಗುಪಕಾರಮಾಡೆ ತಪ್ಪದುಕೇಡೈ ॥ ೧ ॥

ಅಸ್ತು ಬಲಭದ್ರ ಮಹಾರಾಜರು ಓಲಗವನ್ನು ಸೇರುವಷ್ಟರಲ್ಲಿ ನಾವೂ ಹೋಗುವಾ!

(ಪ್ರವೇಶ)

(ಬಲಭದ್ರ ಮಹಾರಾಜನು ಸಿಂಹಾಸನದಲ್ಲಿ, ಇತರ ಸರ್ದಾರರು ತಮ್ಮ ತಮ್ಮ ಸ್ಥಳ

ಗಳಲ್ಲಿ ಕುಳಿತಂತೆ ದರ್ಬಾರು)

**ಬಲರಾಮ**:—ಮಂತ್ರಿಗಳೇ! ಈ ದಿನ ದರ್ಬಾರವ ಕಾರ್ಯಕ್ರಮಗಳೇ ನೇನು?

**ಮಂತ್ರಿ**:-(ಎದ್ದು ನಿಂತು) ಮಹಾಪ್ರಭೊ! ಈ ಹೊತ್ತಿನ ಕಾರ್ಯಕ್ರಮದಲ್ಲಿ ಒಂದು ಉದ್ವೇಗಜನಕವಾದ ಸಂಗತಿಯಿದೆ. ಅದನ್ನು ವಿಜ್ಞಾಪಿಸಿಕೊಳ್ಳುವ ಸಮಯವು ದುರದೃಷ್ಟದಿಂದ ನನ್ನ ಪಾಲಿಗೆ ಬಂದದ್ದಕ್ಕಾಗಿ ತುಂಬಾ ವಿಷಾದವಾಗಿದೆ.

**ಬಲರಾಮ**:—ಹಾಗಾದರೆ? ಏನದು ಬೇಗ ತಿಳಿಪಿಸಿ?

**ಮಂತ್ರಿ**:—ಈ ದಿನವ ಮಹತ್ಕಾರ್ಯವೆಂದರೆ ಸತ್ರಾಜಿತ ಸರ್ದಾರರ ದೂರಿನ ವಿಜ್ಞಾಪನೆಯು. (ಓದುವನು) ಶ್ರೀಮತ್ ಸಕಲ ಗುಣಮಂಡಿತ ದ್ವಾರಕಾಧೀಶ ಮಹಾರಾಜ ರಾಜೇಶ್ವರ ಬಲಭದ್ರ ಮಹಾರಾಜರ ದಿವ್ಯ ಸನ್ನಿಧಿಗೆ ದ್ವಾರಕಾನಿವಾಸಿಯಾಗಿಯೂ ದಿವ್ಯ ಓಲಗದಲ್ಲಿ ಓರ್ವ ಸರದಾರನಾಗಿಯೂ ಸದಾ ರಾಜನಿಷ್ಠೆಯಲ್ಲಿ ಸಂತೋಷಪಡುವನಾಗಿರುವ ಸತ್ರಾಜಿತ ಸರ್ದಾರನು ಮಾಡಿಕೊಳ್ಳುವ ಸವಿನಯ ವಿಜ್ಞಾಪನೆ. ಮಹಾಸ್ವಾಮೀ! ನನ್ನ ತಮ್ಮನಾದ ಪ್ರಸೇನನು ಸೂರ್ಯನನ್ನು ಮೆಚ್ಚುಗೊಳಿಸಿ ಆತನಿಂದ ನಿತ್ಯದಲ್ಲಿಯೂ ಎಂಬತ್ತು ಭಾರ ಸುವರ್ಣವನ್ನು ಪ್ರಸವಿಸುವ ಶ್ಯಮಂತಕವೆನ್ನುವ ದಿವ್ಯಮಣಿಯನ್ನು ಸಂಪಾದಿಸಿದ್ದನು ಎರಡು ಮೂರು ತಿಂಗಳಿಂದ ಅದರ ಪ್ರಸಾದರೂಪವಾದ ಸುವರ್ಣವನ್ನು ಪಡೆಯುಕೊಳ್ಳುತ್ತಲೂ, ಕಾಲಹರಣ ಮಾಡುತ್ತಿದ್ದೆವು. ಒಂದು ತಿಂಗಳ ಪೂರ್ವದಲ್ಲಿ ಮಣಿಯನ್ನು ಕೊರಳಲ್ಲಿ ಧರಿಸಿದ ಪ್ರಸೇನನು ಮೃಗಯಾರ್ಥ ವನಕ್ಕೆ ಹೋದವನು ಮರಳಿ ಮನೆಗೆ ಬಂದಿಲ್ಲ ಮಾಯವಾಗಿಬಿಟ್ಟಿದ್ದಾನೆ. ಬಹುವಾಗಿ ಶೋಧಿಸಿದವು ಆದರೂ ಅವನು ಸಿಗಲಿಲ್ಲ. ಇವೆಲ್ಲ ಸಂಗತಿಗಳಿಂದ ಮಣಿಯು ಸಲುವಾಗಿ ಅವನ ಕೊಲೆಯಾಗಿರುವದೆಂದು ನಾನು ಭಾವಿಸಿದ್ದೇನೆ. ಅಲ್ಲದೇ ಆ ಮಣಿಯ ವಿಷಯದಲ್ಲಿ ಅಭಿಲಾಷೆಯುಳ್ಳವರಾದ ಮುಂದಿನ ಸಂಗತಿಯನ್ನು ಓದಲಾರೆನು. ಅದನ್ನು ಸತ್ರಾಜಿತ ಸರ್ದಾರರೇ ಹೇಳಿಕೊಳ್ಳಲಿ.

**ಸತ್ರಾಜಿತ:**—ಅಷ್ಟಿಯೇನು? ಆ ಮಣಿಯ ವಿಷಯದಲ್ಲಿ ಅಭಿಲಾಷೆಯುಳ್ಳವರಾದ ಶ್ರೀಕೃಷ್ಣ ಮಹಾರಾಜರೇ! ನನ್ನ ತಮ್ಮನ ಕೊಲೆಯನ್ನು ಮಾಡಿಸಿ ಆ ಮಣಿಯನ್ನು ಅಪಹರಿಸಿರುವರೆಂದು ನನ್ನ ಬಲವಾದ ಸಂಶಯವಿದೆ. ಪ್ರಯುಕ್ತ ವಿಚಾರವಾಗಬೇಕೆಂದು ಸೇವಕನ ಪ್ರಾರ್ಥನೆ.

**ವಿಜಯ:**—(ಸಿಟ್ಟಿನಿಂದ) ಏನು? ನಮ್ಮ ಶ್ರೀಕೃಷ್ಣ ಮಹಾರಾಜರು ಕೊಲೆಯನ್ನು ಮಾಡಿಸತಕ್ಕವರೇ? ಸತ್ರಾಜಿತ ಸರ್ದಾರರೇ! ನಿಮ್ಮ ಮೆದುಳು ಕೆಟ್ಟುಹೋಗಿದೆ! ನಿಮ್ಮ ಹೆದಳು.

**ಬಲರಾಮ:**—(ಸಿಟ್ಟಿನಿಂದ) ಸುಮ್ಮನಿರು ವಾದಿಯನ್ನು ಗದರಿಸುವಿಯಾ?

**ಮಧುಕರ:**—ವಿಜಯನೇ! ದರ್ಬಾರದಲ್ಲಿ ಅಧಿಕಪ್ರಸಂಗವು ತರವಲ್ಲ,

**ಗರ್ಗ:**—ಶ್ರೀಕೃಷ್ಣನಂದರೇನು? ಕೊಲೆಯನ್ನು ಮಾಡಿಸೋಣಹೆಂದರೇನು?

**ಬಲರಾಮ:**—ಗುರುಗಳೇ! ವಿಚಾರಣೆಯ ಸಮಯದಲ್ಲಿ ಪಕ್ಷಪಾತ ದೃಷ್ಟಿಯನ್ನು ಬದಿಗಿರಿಸುವದು ಸಮಂಜಸವಲ್ಲವೇ! ಇಸ್ತು ಸತ್ರಾಜಿತನೇ ಕೃಷ್ಣನು ಅಪರಾಧಿಯೆನ್ನುವದಕ್ಕೆ ಏನಾದರೂ ಆಧಾರವನ್ನು ಕೊಡುವಿಯಾ?

**ಸತ್ರಾಜಿತ:** ಕೊಡುವೆನು ಮಹಾಸ್ವಾಮೀ! ಶ್ಯಮಂತಕ ಮಣಿಯು ಸಂಪಾದಿಸಲ್ಪಟ್ಟಾಗಿನಿಂದ ಪದೇ ಪದೇ ನಾರದ ಅಕ್ರೂರ ಮತ್ತು ಇತರ ಅನೇಕ ಯಾದವ ಸರ್ದಾರರ ಪರಿಮುಖದಿಂದ ಕೃಷ್ಣರಾಜರು ಆ ಮಣಿಯನ್ನು ತಮಗೆ ಒಪ್ಪಿಸುವದಕ್ಕಾಗಿ ಕೇಳಿಸಿದ್ದರು. ಇಷ್ಟೇ ನನ್ನ ಆಧಾರವು.

**ಬಲರಾಮ:**—ಏನು ಕೃಷ್ಣಾ! ಇದೇನು ಸಂದರ್ಭ?

**ಕೃಷ್ಣ:**—(ಕುಳಿತು) ನಾನಾವ ಸಂಗತಿಯನ್ನರಿಯೆನು.

**ಮಧುಕರ:**—(ಎದ್ದುನಿಂತು) ಕುಳಿತು ಉತ್ತರಿಸುವದರಿಂದ ಸಿಂಹಾಸನದ ಅಪಮಾನವಾಗುವದೆಂದು ನನ್ನ ಅಭಿಪ್ರಾಯ.

**ಕೃಷ್ಣ:**—(ಎದ್ದುನಿಂತ) ನಾನಾವಸಂಗತಿಯನ್ನೂ ಅರಿಯೆನು.

**ಮಧುಕರ:**—ಲೋಕದಲ್ಲಿ ಅಪರಾಧಿಗಳು ಕೊನೆಯವರೆಗೂ ತಪ್ಪು

ತಪ್ಪನ್ನು ಒಪ್ಪಿಕೊಳ್ಳುವದಿಲ್ಲ.

**ಸಭಿಕರು** :—ಅದು ಸರ್ವಸಿದ್ಧ.

**ಗರ್ಗ** :—ಅಯ್ಯಾ! ಸಭಿಕರೇ ಸಾಮಾನ್ಯ ಅಪರಾಧಿಗಳಂತೆ ನೀವು ಶ್ರೀಕೃಷ್ಣನನ್ನು ಗಣಿಸಬಹುದೇ? ಈತನಾರು? ನಿಮ್ಮ ಮುಂದಾಳುವಲ್ಲವೇ? ಅನಾಮಧೇಯರಾಗಿ ದನಕರುಗಳನ್ನು ಕಾದುಕೊಂಡು ವನದಲ್ಲಿ ವಾಸಿಸುವ ಯಾದವರು ಶೂರರಾದ ಕ್ಷತ್ರಿಯರೆಂದು ಸಿದ್ಧಮಾಡಿದವನಲ್ಲವೇ? ಲೋಕದಲ್ಲಿ ಆಚಂದ್ರಾರ್ಕವಾಗಿ ನಿಮ್ಮ ಕೀರ್ತಿಯು ಉಳಿಯುವಂತೆ ಮಾಡಿದ ಪ್ರತಾಪಿಯಲ್ಲವೇ? ಇಂಥವನನ್ನು ನೀವು ಕೊಲೆಪಾತಕರ ಕೀಳು ಪಂಗ್ತಿಯಲ್ಲಿ ಗಣಿಸಬಹುದೆ.

**ಸತ್ರಾಜಿತ** :—ಗುರುಗಳೇ ನಾವೇನು ಹಾಗೆ ಗಣಿಸಿಲ್ಲ ಶ್ರೀಕೃಷ್ಣಮಹಾರಾಜರ ಸ್ವಾರ್ಥವೇ ಅವರನ್ನು ಕೊಲೆಪಾತಕರ ಕೀಳು ಪಂಗ್ತಿಯಲ್ಲಿಗಣಿಸಿದ್ಕೆ, ಅದಕ್ಕಾರೇನುಮಾಡತಕ್ಕದ್ದು?

**ಗರ್ಗ** :—ಏನೋ ದುರಾದೃಷ್ಟದಿಂದ ಈಗಿನ ಕಾಲಕ್ಕೆ ಕೃಷ್ಣನ ಮೇಲೆ ಅಪವಾದವು ಬಂದಿರುವದು. ಆದರೆ ಅದು ಅಪವಾದವೇ? ಏನೂ ಕಾಣದೆಯೂ ಕೇಳದೆಯೂ ಕೃಷ್ಣನು ನಿರ್ದೋಷಿಯೆಂದು ನಾನು ಹೇಳುವೆನು ಹಾಗೆ ನನಗೆ ಆತ್ಮವಿಶ್ವಾಸವಿದೆ.

**ಮಧುಕರ** :—ಗುರುಗಳೇ ತಾವು ಅಷ್ಟೊಂದು ಎದೆಗೆ ಕೈ ತಟ್ಟಿಕೊಂಡು ಹೇಳುವದು ನಮಗೆ ಸಮಾಧಾನವಿಲ್ಲ.

**ಗರ್ಗ** :—ಅದೇಕೆ ಸಮಾಧಾನವಿಲ್ಲ?

**ಸತ್ರಾಜಿತ** :—ತಾವು ಕೃಷ್ಣರಾಜರ ಪಕ್ಷಪಾತಿಗಳೆಂದು ನಮ್ಮ ಭಾವನೆಯಿದೆ. ಅಲ್ಲದೇ ಎಂದೂ ತಾವು ಯಾವ ಸಂದರ್ಭದಲ್ಲಿಯೂ ಕೃಷ್ಣರಾಜರ ವಿರುದ್ಧವಾಗಿ ನಿಂತೇ ಇಲ್ಲ.

**ಕೃಷ್ಣ** :—ಗುರುಗಳೇ! ಯಾದವ ಸರ್ದಾರರ ಬುದ್ಧಿಯು ಮಲಿನವಾಗಿದೆ ಕಿವಿಗಳು ಕೀಳಾಗಿವೆ. ದೃಷ್ಟಿಕೋಣವು ಬದಲಾಗಿದೆ. ಅಂಥವರಗೂಡ ವಾದಿಸುವದರಿಂದ ಫಲವಿಲ್ಲ. ಅವರು ವಾದಿಗಳು ನಾನು ಪ್ರತಿವಾದಿಯು ಆಗುವದನ್ನೆಲ್ಲ ನೋಡುತ್ತ ಹೋಗಿ.

**ಬಲರಾಮ** :—ಕೃಷ್ಣಾ ! ಇವರ ವಿಚಾರವೇನು? ದ್ವಾರಕೆಯ ಯುವ ರಾಜನು ಕೀಳು ತರಗತಿಯ ಕೊಲೆಯ ಅಪವಾದಕ್ಕೆ ಗುರಿಯಾಗಲು ಮಾರ್ಗವಿಲ್ಲ.

**ಕೃಷ್ಣ** :—ಹಾಗಾದರೆ ನಾನೇನು ಮಾಡಲಿ ?

**ಮಧುಕರ** :—ಅಪವಾದದಿಂದ ಉಳಿಯಬೇಕಾದರೆ ಅಪಹರಿಸಿದ ಶ್ಯಮಂತಕ ಮಣಿಯನ್ನು ಸತ್ರಾಜಿತನಿಗೆ ಕೊಟ್ಟುಬಿಡು.

**ಕೃಷ್ಣ** :—ಏಕೆ? ಮೂರ್ಖನೇ ! ಬಲ್ಲಹಾಗೆ ಹರಟುವಿ ? ಜೋಕೆ ! ಮಣಿಯನ್ನಪಹರಿಸಿದವನು ನಾನೇ ಎಂದು ತೀರ್ಪು ಹೇಳುತ್ತಿರುವೆಯಾ ? ನಿನ್ನ ನಾಲಿಗೆಯನ್ನು ಸೀಳಿಬಿಟ್ಟೇನು ?

**ಸಭಿಕರು** :—ಕೃಷ್ಣರಾಜನೇ ಅತಿಕ್ರಮಣವು ತರವಲ್ಲ.

**ಕೃಷ್ಣ** :—ಹಾಗಾದರೆ ನೀವು ಮಾಡುವುದೇನು ? ಮಣಿಯನ್ನು ಅಪಹರಿಸಿದವನು ನಾನೇ ?

**ಸತ್ರಾಜಿತ**: ಅಹುದು ನೀವೇ ಎಂದು ಸಕಲರಿಗೂ ಮನದಟ್ಟವಾಗಿದೆ.
(ಕೃಷ್ಣನು ಸಭಿಕರ ಮೇಲೆ ಸಾಗಿಹೋಗುವನು. ಗರ್ಗ ಋಷಿಯು ತಡೆದು ನಿಲ್ಲಿಸುವನು.)

**ಗರ್ಗ** :—( ಸಿಟ್ಟಿನಿಂದ ) ಇದು ಕೃಷ್ಣನ ವಿಷಯಕವಾಗಿ ನಿಮ್ಮಲ್ಲಿರುವ ಮತ್ಸರದ ಲಕ್ಷಣವನ್ನು ಸೂಚಿಸುತ್ತಿರುವದು. ಹೀಗೆ ನಿಮ್ಮ ಭಾವನೆಗಳಾದದ್ದು ಯಾದವರ ಭಾವೀ ಅಧಃಪಾತದ ಲಕ್ಷಣವು. ಯಾದವರು ರಾಜ್ಯವನ್ನು ಪಾಲಿಸುವರಲ್ಲವೇ ಅಲ್ಲ ಅಂತಹದು ನಿಮಗೊಂದು ರಾಜ್ಯವು ಶ್ರೀಕೃಷ್ಣನ ಪುಣ್ಯದಿಂದ ಸಿಕ್ಕಿದ್ದು ನಿಮ್ಮ ಯೋಗ್ಯತೆಯನ್ನು ಮೀರಿದ ಪದವಿಯಾಯಿತು. ಸರಿ; ಕೃಷ್ಣರಾಜನಾದರೂ ಹೇಳಿಯೇ ಬಿಟ್ಟಿದ್ದಾನೆ ಆಗುವದನೆಲ್ಲ ನೋಡುತ್ತ ಹೋಗೆಂದು, ನಾನಾದರೂ ಏತಕ್ಕೆ ರಸಕಸಿಯನ್ನು ಮಾಡಿಕೊಳ್ಳಲಿ?

**ಬಲರಾಮ** :—ಗುರುಗಳೇ ! ಕೃಷ್ಣನು ನಿರ್ದೋಷಿಯಾಗುವದು ನನಗೇನು

ಬೇಡವೇ? ಆದರೆ ಒಂದು ಘನವಾದ ದೋಷವು ಕೃಷ್ಣನ ಮೇಲೆ ಹೊರಿಸಲ್ಪಟ್ಟಿರುವದು. ಅಂದಬಳಿಕ ಅದು ನಿವಾರಣೆಯಾಗುವತನಕ ನಾನು ಕೃಷ್ಣನ ವಿಷಯದಲ್ಲಿ ತ್ರಯಸ್ಥನೇ; ಹೊರಿಸಲ್ಪಟ್ಟ ದೋಷದಿಂದ ಮುಕ್ತನಾಗುವ ಅಪೇಕ್ಷೆಯಿದ್ದರೆ ಆ ಶ್ಯಮಂತಕ ಮಣಿಯನ್ನು ಶೋಧಿಸಿ ತಂದಹೊರ್ತು ಕೃಷ್ಣನಿಗೆ ವಿಧಿಯಿಲ್ಲ.

**ಕೃಷ್ಣ**:—ಮಹಾರಾಜರೇ! ಮಣಿಯು ಮಾಯವಾಗಿದೆ ಅದರ ಶೋಧ ವಾಗಬೇಕೆಂದು ವಿಜ್ಞಾಪಿಸಿಕೊಳ್ಳುವದಕ್ಕೂ ಮತ್ತು ಹೀಗೆ ದುರಾ ರೋಪವನ್ನು ಹೊರಿಸುವದಕ್ಕೂ ಮಹದಂತರವಿದೆ

**ಬಲರಾಮ**:—ಸರ್ವಸ್ವವನ್ನೂ ಕಳೆದುಕೊಂಡ ಸತ್ರಾಜಿತನು ತಾಪವಾಗಿ ಪ್ರಸಂಗಾನುಸಾರ ಹಾಗೆ ತಪ್ಪಾಗಿ ದೂರಿಕೊಂಡರೂ ಅದು ಕ್ಷಮ್ಯವು. ಆದರೆ ಮಣಿಯೊಡನೆ ಪ್ರಸೇನನು ಮಾಯವಾಗಿರುವದೊಂದು ಸಂಗ ತಿಯು ನಿಜವಷ್ಟೇ? ಅದನ್ನಾದರೂ ಗೊತ್ತುಹಚ್ಚಿ ಸತ್ರಾಜಿತನ ಸಮಾ ಧಾನವು ನಮ್ಮಿಂದಾಗಬೇಕಾದದ್ದು ಕರ್ತವ್ಯ.

**ಕೃಷ್ಣ**:—ಮಹಾರಾಜರೇ! ಪ್ರಜರ ಹಿತವನ್ನು ಕಾಪಾಡುವದಕ್ಕಾಗಿ ರಾಜ್ಯ ಸೂತ್ರಗಳನ್ನು ವಹಿಸಿಕೊಂಡಿರುತ್ತಾರೆನ್ನುವದಕ್ಕೆ ನನ್ನ ಒಪ್ಪಿಗೆ. ಆದರೆ ಈ ಯಾದವ ಮಂಡಲವು ನನ್ನ ವಿಷಯಕ್ಕೆ ಅನ್ಯಥಾ ವಿಚಾರಗಳನ್ನು ಮಾಡಿದ್ದಕ್ಕೆ ಜುಗುಪ್ಸೆಯು ಹುಟ್ಟಿದೆ ಅತಃಪರ ಈ ಯಾದವ ರಾಜ್ಯದ ವಿಶೇಷವೇನು? ಈ ಲೌಕಿಕದ ಸಂಬಂಧವನ್ನೇ ಬಿಟ್ಟು ಬಿಡಬೇಕೆಂದು ಮನಸ್ಸಿನ ನಿಶ್ಚಯವಾಗಿದೆ. ನನ್ನ ಉತ್ಕರ್ಷವನ್ನು ದೇವರು ಮಾಡಿದ್ದಾನೆ. ನನ್ನ ಕಾರ್ಯಗಳಿಗೆ ಅವನೇ ಯಶವನ್ನು ಕೊಡುತ್ತಲಿದ್ದಾನೆ. ನನ್ನ ಉತ್ಕರ್ಷಾಪಕರ್ಷಗಳೆಲ್ಲವೂ ದೈವಾಧೀನ ವಾದವುಗಳು. ನಾನು ದುರ್ಜನರ ನಿಂದೆಗೆ ಪಾತ್ರನಾದಹಾಗೆಲ್ಲ ದೇವರ ಪರಮ ಪ್ರೀತಿಯವನಾಗುವೆನೆಂದು ಆತ್ಮವಿಶ್ವಾಸವಿದೆ. ಮಾಡುವ ದೇನು? ಯಾದವ ಮಂಡಲದ ಮನವು ಕೇವಲ ಕಲುಷಿತವಾಗುತ್ತಿರು ವದು. ಅದು ಸದ್ಗುರುಗಳಾದ ಗರ್ಗಮುನಿಗಳ ವಾಕ್ಯದಂತೆ ಯಾದ ವರಧಃಪಾತದ ಲಕ್ಷಣವು. ಆಗಲಿ, ಸತ್ರಾಜಿತನ ಸೊತ್ತಾದ ಶ್ಯಮಂತಕ

ಮಣಿಯನ್ನು ಶೋಧಿಸಿ ತರುವತನಕ ನಾನು ಈ ಯಾದವ ರಾಜ್ಯದಲ್ಲಿ ನಿಲ್ಲಲಿಕ್ಕಿಲ್ಲ ಮತ್ತು ನೀರು ಕುಡಿಯಲಿಕ್ಕಿಲ್ಲ. ಆಗಲಿ. ಬಂಧುಗಳಾದ ಯಾದವ ಸರದಾರರೇ! ಭ್ರಾಮಕವಾದ ನನ್ನ ದುರ್ಗುಣಗಳನ್ನು ತಿದ್ದುವ ಹವ್ಯಾಸಕ್ಕೆ ಬೀಳುವದಕ್ಕಿಂತಲೂ ನೀವೇ ನಿಮ್ಮ ಮನಸ್ಸನ್ನು ಶುದ್ಧೀಕರಿಸಿ ಆತ್ಮೋನ್ನತಿಯನ್ನು ಮಾಡಿಕೊಳ್ಳುತ್ತ ಹೋಗಿ; ಅಂದರೇನೇ ನಿಮ್ಮ ರಾಜ್ಯದ ಅಸ್ತಿತ್ವವೂ, ನಿಮ್ಮ ಜನಾಂಗದ ಅಸ್ತಿತ್ವವೂ ಉಳಿಯುವದು. ಇಲ್ಲವಾದರೆ ಯಾದವರೂ ಅವರ ರಾಜ್ಯವೂ ನಾಮಶೇಷವಾಗುವದು ಖಂಡಿತ. ಬೇಕಾದರೆ ಈ ನನ್ನ ಮಾತುಗಳನ್ನು ಒಪ್ಪಿಕೊಳ್ಳಿ ಇಲ್ಲವಾದರೆ ಬಿಟ್ಟುಬಿಡಿ. ಒರುವೆನು ಲೋಭವಿರಲಿ. (ಸತ್ರಾಜಿತನು ಹೋಗುವನು ವಿಜಯನು ಹಿಂಬಾಲಿಸುವನು)

(ಪ್ರವೇಶ—ರಸ್ತೆ—ವಿಜಯ—ಕೃಷ್ಣ)

**ವಿಜಯ** :— ಕೃಷ್ಣಯ್ಯಾ ದುರ್ಜನರ ಮಾತುಗಳಿಗೆ ಕೋಪಗೊಂಡು ಯಾದವರಾಜ್ಯದಲ್ಲಿ ನಿಂತು ನೀರು ಕುಡಿಯುವದಿಲ್ಲವೆಂದು ಪ್ರತಿಜ್ಞೆಯನ್ನಂತೂ ಮಾಡಿದಿ. ಈಗ್ಗೆ ನೀನು ಹೋಗುವದೆಲ್ಲಿ?

**ಕೃಷ್ಣ** :— ರಾಗ॥ ಕಾನಡಾ॥ ತ್ರಿವಟ

॥ **ಪದ** ॥ ಪೋಗುವೆನೋ ಸಂಚಾರಕೆ ವಿಜಯಾ ॥ ಪಲ್ಲ ॥
ಅನುಸರಿಸಿ ಮನಸಿನ ಪ್ರೇರಣೆಯಾ ॥ ೧ ॥
ಯಾವ ದೇಶವೋ ಯಾವ ಕೋಶವೋ ।
ಯಾವ ನಗರವೋ । ಯಾವ ವಿಪಿನವೋ ॥
ಯಾವ ಗಿರಿಯ ಕಂದರಗಳ ಪ್ರಾಂತವೋ ॥
ಯಾವದನ್ನು ನಾ ಹೇಳೆ ನಿಶ್ಚಯಾ ॥ ೨ ॥

ಅಂತರಾತ್ಮನು ಎತ್ತ ಪ್ರೇರಣೆಯನ್ನು ಮಾಡುವನೋ ಅತ್ತ ಹೋಗುವೆನು.

**ವಿಜಯ** :—ನಾನು ಮಾತ್ರ ನಿನ್ನನ್ನು ಹಿಂಬಾಲಿಸದೇ ಬಿಡಲಿಕ್ಕಿಲ್ಲ. ಕೃಷ್ಣಯ್ಯಾ ನೀನಿಲ್ಲದ ನಗರವು ಅರಣ್ಯದಂತೆಯೇ ಸರಿ. ಅದಿರಲಿ,

ಶ್ಯಮಂತಕ ಮಣಿಯ ಶೋಧನ ಪ್ರತಿಜ್ಞೆಯನ್ನಂತು ಮಾಡಿದಿ. ಇನ್ನು ಮೇಲೆ ಅದನ್ನು ಹೇಗೆ ಶೋಧಿಸುವೆ? ಇಂಥ ಸ್ಥಳದಲ್ಲಿರುವದೆಂದು ಗೊತ್ತಾಗಿದ್ದರೆ ಸಾಹಸಪಟ್ಟು ತರುವ ಶಕ್ತಿಯು ನಿನ್ನಲ್ಲಿದೆ. ಆದರೆ ಅದರ ವಿಷಯದಲ್ಲಿ ಯಾವ ಸಂಗತಿಯೂ ಗೊತ್ತಾಗಿಲ್ಲ. ಅಂದಬಳಿಕ ಅದನ್ನು ಹೇಗೆ ಶೋಧಿಸುವಿ?

**ಕೃಷ್ಣ** :—ವಿಜಯಾ! ತದೇಕ ಧ್ಯಾನಮಗ್ನನಾಗಿ ಕಾರ್ಯಾರಂಭವನ್ನು ಮಾಡಿದರೆ ಅಚಿಂತಾವ್ಯಕ್ತ ರೂಪವನ್ನು ಕೂಡಾ ವಶಮಾಡಿಕೊಳ್ಳಬಹುದು. ಹೀಗಿರಲು ದೃಶ್ಯಪದಾರ್ಥವಾಗಿಯೂ ಈ ಭೂಮಿಯಲ್ಲಿ ಇರುವದಾಗಿರುವ ಆ ಶ್ಯಮಂತಕ ಮಣಿಯ ಶೋಧವನ್ನು ಮಾಡಿ ವಶಪಡಿಸಿಕೊಳ್ಳುವದಸಾಧ್ಯವೆಂದು ತಿಳಿದಿಯಾ? ಎಲೋ! ನಿರಪೇಕ್ಷೆ ಬುದ್ಧಿಯಿಂದಲೂ ನಿಃಸ್ವಾರ್ಥ ಬುದ್ಧಿಯಿಂದಲೂ ಕಾರ್ಯ ಮಾಡುವವರಿಗೆ ಜಗದೀಶನು ಬೆಂಬಲನಿರುತ್ತಾನೆ. ನೋಡುತ್ತಲಿರು ಆ ಶ್ಯಮಂತಕ ಮಣಿಯು ಸಪ್ತಪಾತಾಳಗಳಾಚೆಯಲ್ಲಿದ್ದರೂ ಶೋಧಿಸದೇ ಬಿಡೆನು. ನಡೆ ವೃಥಾ ಕಾಲಹರಣವು ಬೇಡ ರುಕ್ಮಿಣಿಯನ್ನಷ್ಟು ಕಂಡು ಮುಂದಿನ ಕಾರ್ಯಕ್ಕುದ್ಯುಕ್ತರಾಗುವಾ!

**ವಿಜಯ** :— ನೀನು ರುಕ್ಮಿಣೀದೇವಿಯವರನ್ನು ಕಂಡುಬರುವಷ್ಟರಲ್ಲಿ ನಾನು ಸಾರಥಿಗೆ ರಥವನ್ನು ಸಿದ್ಧಮಾಡಿ ತರಲಿಕ್ಕೆ ಹೇಳುವೆನು.

**ಕೃಷ್ಣ** :—ಬೇಡ ಬೇಡ ರಥವೂ ಬೇಡಾ. ಸಾರಥಿಯೂ ಬೇಡ ಏನೂ ಬೇಡ. ಏಕಾಂಗಿಯಾಗಿ ಹೊರಡುವೆನು.

**ವಿಜಯ** :—ಅಂದರೆ ನನ್ನನ್ನು ಇಲ್ಲಿಯೇ ಬಿಟ್ಟುಹೋಗುವಿಯಾ?

**ಕೃಷ್ಣ** :—ಅಹುದು ಏತಕ್ಕೆ ನೀನು ನನ್ನ ಸಂಗಡ ಬರುವೆ?

( ವರವಾಲು ಸಖಿ ) ಎಂಬಂತೆ.

॥ **ಪದ** ॥ ಬರಬೇಡವ್ರೋ ಯನ್ನೊಡನೆ। ವರಸಖವಿಜಯಾ ॥ ಪಲ್ಲ ॥

ಮತಿಯಾವರಿಸಿದೆ ನಿನ್ನನು । ತರವೆನೋ ದೇಶಾಟನ ॥ ೧ ॥

ನೆಲೆಯರಿಯುವೆ। ಆ ಮಣಿಯಾ। ಅಲೆದಾಡುವೆನೋ ನಾನು ।

ಫಲವೇನೈ ? ಹಿಂಬಾಲಿಸಿ । ಬಲಹೀನನು ನೀನು । ೨ ॥

ಅವಿರಲ ಸೇವೆಯು ಮಾಡಿದಿ । ಬಹುವಾಗಿ ನೀ ನಿನ್ನಯ ।
ತವತಾರುಣ್ಯದಿ । ಸಲ್ಲದು ಈ ವಾರ್ಧಿಕ್ಯದಿ ಕಷ್ಟವು ॥ ೩ ॥

ಆದಕಾರಣ ವೃದ್ಧಾಪ್ಯದಿಂದ ನೀನು ಹತಬಲನಾಗಿರುವಿ, ಇಲ್ಲಿಯೇ ಇದ್ದು ಬಿಡು.

**ವಿಜಯು** :—ಅದು ಸಾಧ್ಯವಿಲ್ಲ. ನಿನ್ನ ಜತೆಯಲ್ಲಿದ್ದು ಅಖಂಡವಾಗಿ ನಿನ್ನ ಸೇವೆಯನ್ನು ಮಾಡುತ್ತಿರುವಾಗ್ಗೆ ನನಗೆ ಈ ವೃದ್ಧಾಪ್ಯದ ಸ್ಮೃತಿಯೂ ಕೂಡಾ ಬರುವದಿಲ್ಲ. ನಿನ್ನನ್ನಗಲಿರುವದೂ, ಮತ್ತು ಮೃತಿಯನ್ನು ಹೊಂದುವದೂ ಎರಡೂ ಸಮಾನವೇ. ಕೃಷ್ಣಯ್ಯ ಅಮುಕ ಲೋಕದಲ್ಲಿ ಅತಿಶಯವಾದ ಸೌಖ್ಯವಿದೆಯೆಂದು ಹೇಳುವರು ಆದರೆ ನಿನ್ನ ಸಮಾಗಮನದಲ್ಲಿರುವಾಗ್ಗೆ ನಾನನುಭವಿಸುವ ಸೌಖ್ಯಗಳಿಗೆ ಅದು ಎಂದೂ ಸಮವಾಗಲರಿಯದು. ಪ್ರಯುಕ್ತ ನನ್ನನ್ನು ಬಿಟ್ಟು ಹೋಗುವ ಆಲೋಚನೆಯನ್ನೇ ಮಾಡಬೇಡ. ಒಂದು ಸಮಯ ನೀನು ನನ್ನನ್ನು ಬಿಟ್ಟರೂ ನಾನು ನಿನ್ನನ್ನೆಲ್ಲಿಬಿಡುವೆನು ?

**ಕೃಷ್ಣ** :—ವಿಜಯಾ ! ಸುಮ್ಮನೇ ಹಾಗೆ ಹೇಳಿದೆನು. ನೀನು ನನ್ನ ಜೀವದ ಜತೆಗಾರನು ಬಾಲಮಿತ್ರನು. ನನ್ನ ವಿಷಯದಲ್ಲಿ ನಿಷ್ಕಲಂಕ ಪ್ರೇಮವುಳ್ಳವನು. ಇಂಥ ನಿನ್ನನ್ನಗಲುವದು ನನಗಾದರೂ ಸಾಧ್ಯವಿಲ್ಲ; ನಡೆ ಹೋಗುವ ( ಹೋಗುವರು )

ಪ್ರವೇಶ—ರುಕ್ಮಿಣಿಯು ಮಹಲು

**ರುಕ್ಮಿಣಿ** :—ದರ್ಬಾರದಲ್ಲಿ ವಿಶೇಷ ರಸಕಸಿಯು ನಡೆಯುತ್ತಿರುವದೆಂದು ದಾಸಿಯು ಹೇಳಿದಳು. ಏನು ಸಮಾಚಾರವಿರಬಹುದು ? ಅದು ಪ್ರಾಣನಾಥನಿಗೆ ಸಂಬಂಧಿಸಿದ ವಿಷಯವಾಗಿರಬಹುದೆಂದು ಸಹ ಉಸುರಿಕೊಂಡಳು. ಯಾಕೆಂದರೆ ಪ್ರಾಣನಾಥನು ಆವೇಶಪೂರ್ಣ ಮಾತುಗಳನ್ನು ಯಾದವರನ್ನುದ್ದೇಶಿಸಿ ಹೇಳುತ್ತಿದ್ದನಂತೆ. ಪರಿಷ್ಕಾರವಾಗುವ ತನಕ ಜೀವಕ್ಕೆ ಸಮಾಧಾನವಾಗದು. ಏನು ? ವಿಜಯಾ ! ಜೀವನೇಶನು ಬಂದನೇ ?

**ವಿಜಯ :**—ಅಗೋ ಅಮ್ಮನವರೇ ಎದುರಿನಲ್ಲಿಯೇ ಬರುತ್ತಲಿದ್ದಾರೆ.

**ಕೃಷ್ಣ :**—( ಬೇಸರವನ್ನು ನಟಿಸುತ್ತ ಮಂಚದ ಮೇಲೆ ಕುಳಿತುಕೊಳ್ಳುವನು )

**ರುಕ್ಮಿಣಿ :**—(ಸ್ವ) ನಾನು ಕೇಳಿದ ಸಮಾಚಾರವು ನಿಜವಿರಲಿಕ್ಕೇ ಬೇಕು.

(ಪ್ರಕಾಶ)

॥ **ಪದ** ॥ ಸೂಚಿಸುವದು ವದನಾಬ್ಜವು । ಯೋಚನೆಯೊಳ್ ।
ಮುಳುಗಿದಂಥ ಸಂದರ್ಭವನೂ । ಭೋ ಚಾರುಚರಿತೆಸಖಿ
ಸೇ । ಯಾಚಿಸುವೆನು ತಿಳಿಯಲಿದರಕಾರಣವನು ॥

ಉದಾಸೀನವೃತ್ತಿಯು ಯಾವದೋ ಒಂದು ಪ್ರಮಾದ ಸಂದರ್ಭವನ್ನು ಸೂಚಿಸುವದು.

**ಕೃಷ್ಣ ;**—ರುಕ್ಮಿಣೀ! ನಿಜವಾಗಿಯೂ ನಾನು ಉದಾಸೀನನಾಗಿದ್ದೇನೆ

**ರುಕ್ಮಿಣಿ :**—ಅದೇಕೆ?

**ವಿಜಯ :**—ಸಕಲ ಯಾದವರೂ ನಮ್ಮ ಕೃಷ್ಣಯ್ಯನ ವಿಷಯದಲ್ಲಿ ವಿಷ ಕಾರುತ್ತಿರುವಾಗ್ಗೆ ಔದಾಸೀನ್ಯವು ಹುಟ್ಟದೇನುಮಾಡೀತು? ಅಮ್ಮನವರೇ ಕೃಷ್ಣಯ್ಯನು ಮಹಾ ಧೈರ್ಯಶಾಲಿಯಂತೇ ಯಾದವರ ಉಪಟಳವನ್ನು ತಾಳಿಕೊಂಡಿದ್ದಾನೆ. ಮತ್ತೊಬ್ಬರಾಗಿದ್ದರೆ ಸರ್ವಸಂಗ ಪರಿತ್ಯಾಗವನ್ನು ಮಾಡಿ ಇಷ್ಟು ಹೊತ್ತಿನಲ್ಲಿ ಸನ್ಯಾಸವನ್ನು ಸ್ವೀಕರಿಸಿ ಆಚೆಗಾಗುತ್ತಿದ್ದರು.

**ರುಕ್ಮಿಣಿ :**—ಆದ ಸಮಾಚಾರವೇನು? ಸ್ವಲ್ಪ ತಿಳಿಯಲಿ.

**ಕೃಷ್ಣ :**—ರುಕ್ಮಿಣೀ! ಸತ್ರಾಜಿತನ ತಮ್ಮನಾದ ಪ್ರಸೇನನು ಸೂರ್ಯೋಪಾಸನೆಯನ್ನು ಮಾಡಿ ಒಂದು ಮಣಿಯನ್ನು ಸಂಪಾದಿಸಿದ ಸಮಾಚಾರವನ್ನು ನೀನು ಕೇಳಿರುವಿಯಷ್ಟೇ?

**ರುಕ್ಮಿಣಿ :**—ಅಹುದು ಕೇಳಿರುವೆನು. ಆದೇ ಎಂಭತ್ತು ಭಾರ ಸುವರ್ಣವನ್ನು ನಿತ್ಯದಲ್ಲಿಯೂ ಪ್ರಸವಿಸುವ ಶ್ಯಮಂತಕಮಣಿಯಂತಲ್ಲವೇ?

**ಕೃಷ್ಣ :**—ಅಹುದು ಈಗ್ಗೆ ಒಂದು ತಿಂಗಳಾಚೆಯಲ್ಲಿ ಆ ಮಣಿಯನ್ನು ಕೊರಳಲ್ಲಿ ಧರಿಸಿ ಬೇಟೆಯ ಸಲುವಾಗಿ ವನಕ್ಕೆ ಹೋದ ಪ್ರಸೇನನು ಮರಳಿ ಮನೆಗೆ ಬಂದಿಲ್ಲವಂತೆ.

**ರುಕ್ಮಿಣಿ :**—ಅದಕ್ಕೆ ನೀವೇನು ಮಾಡತಕ್ಕದ್ದು?

**ಕೃಷ್ಣ**:— ಆ ದಿವ್ಯ ಮಣಿಯ ಲೋಭದಿಂದ ಪ್ರಸೇನನ ಕೊಲೆಯನ್ನು ಮಾಡಿಸಿ ನಾನೇ ಅದನ್ನು ಅಪಹರಿಸಿರುವೆನೆಂದು ಸತ್ರಾಜಿತನು ದೂರು ತಂದಿದ್ದಾನೆ.

**ರುಕ್ಮಿಣಿ**;—ಯಾವ ಭಾಗ್ಯವು ಕಡಿಮೆಯಾಗಿತ್ತೆಂದು ತಾವು ಆ ಮಣಿಯನ್ನಪಹರಿಸಿರುವಿರಂತೆ ?

**ಕೃಷ್ಣ** :—ಅದನ್ನಾರು ಬಲ್ಲರು?

**ವಿಜಯು** :—ಅಮ್ಮನವರೇ! ಎಲ್ಲವೂ ಚವತಿಯ ಚಂದ್ರನ ಪ್ರಭಾವವು. ಎಷ್ಟು ಬೇಡವೆಂದರೂ ಕೇಳದೇ ಕೃಷ್ಣಯ್ಯನು ದುರಾಗ್ರಹದಿಂದ ಅವನನ್ನು ನೋಡಿಯೇ ಬಿಟ್ಟನು.

**ಕೃಷ್ಣ**:—ಅದೆಲ್ಲವಿರಲಿ ಮೊದಲು ಪ್ರತಿಜ್ಞೆಯಂತೆ ಆ ಮಣಿಯ ಶೋಧವನ್ನು ಮಾಡಲೇ ಬೇಕಲ್ಲವೇ?

**ರುಕ್ಮಿಣಿ** :—ಏನು ? ಮಣಿಯನ್ನು ಶೋಧಿಸುವೆನೆಂದು ಪ್ರತಿಜ್ಞೆಯನ್ನು ಮಾಡಿರುವಿರಾ ?

ಕೃಷ್ಣ :—ಹಾಗೆ ಪ್ರತಿಜ್ಞೆಯನ್ನು ಮಾಡುವದಲ್ಲದೇ ಮಣಿಯ ಶೋಧವಾಗುವತನಕ ದ್ವಾರಕೆಯಲ್ಲಿ ಸಿಂಕು ನೀರು ಕುಡಿಯಲಿಕ್ಕಿಲ್ಲವೆಂದು ಭಾಷೆಯನ್ನು ಸಹ ಕೊಟ್ಟಿರುವೆನು.

ರುಕ್ಮಿಣಿ :— ಏನು ಪ್ರಮಾದವಿದು?

ಕೃಷ್ಣ :—ಅದಕ್ಕೇನು ಮಾಡತಕ್ಕದ್ದು? ಮಾತು ಮಿಂಚಿ–ಹೋಗಿದೆ. ನಡೆ ವಿಜಯಾ! ಹೀಗೆಯೇ ಪ್ರವಾಸಕ್ಕೆ ಸಿದ್ಧನಾಗು. ರುಕ್ಮಿಣೀ! ನನಗೆ ನಿಲ್ಲಲವಕಾಶವಿಲ್ಲ. ನೀನೇ ಇತರ ನಿನ್ನ ಭಗಿನಿಯರಿಗೆ ಈ ವೃತ್ತಾಂತವನ್ನು ತಿಳಿಹಿಸು. ಬರುವೆನು.

**ರುಕ್ಮಿಣಿ**:—ಆಗಲಿ. ದುರಾರೋಪನಿವಾರಣೆಯನ್ನಂತೂ ಮಾಡಿಕೊಳ್ಳಲೇ ಬೇಕಲ್ಲವೇ ? ಅಗತ್ಯವಾಗಿ ಹೋಗಿಬನ್ನಿ. ನಾನಾವಕಾಲಕ್ಕೂ ತಮಗೆ

ವಿಘ್ನವನ್ನು ಕಲ್ಪಿಸುವದಿಲ್ಲ. ದೇವರು ನಿಮಗೆ ಮಹತ್ಕಾರ್ಯದಲ್ಲಿ ಯಶವನ್ನು ಕೊಡಲಿ.

ರಾಗ॥ ಭೂಪಕಲ್ಯಾಣ॥ ತಾಲ ತ್ರಿವಟ

॥ **ಪದ** ॥ ಯಶವನು ಪಾಲಿಸಲೀತಾ । ನಿಮಗೆ ನಾಥಾ ।
ತ್ರಿಭುವನ ಮಾತಾ ॥ ಮಣಿಯು ತೀವ್ರದಲಿ ।
ನಿಮಗೆ ದೊರೆಯಲಿ । ಘನ ಅಪವಾದವು ದೂರಾಗಲಿ ।
ಜವದಿ ಮನೆಗೆ ಬರುವಂತೆ ಮಾಡಲಿ ॥ ೧ ॥

## ೨ನೇ ಅಂಕವು ಸಮಾಪ್ತಃ

# ೩ನೇ ಅಂಕ

(ಇಬ್ಬರು ನಗರ ರಕ್ಷಕರು ಸುವರ್ಣಾಲಂಕಾರಗಳಿಂದ ನಗರ ಮಹಾದ್ವಾರದಲ್ಲಿ ಪಹರೆ **ಮಾಡುತ್ತಿರುತ್ತಾರೆ.)** ಇಬ್ಬರೂ!

(ಬಾ ಸ್ವಾಮಿ, ಬಾ ಸ್ವಾಮೀ) ಎಂಬಂತೆ.

॥ **ಪದ** ॥ ನಾವಾಗಿರುವೆವು ಬಲು ಶಿಂಗಾರ । ಈವಾಗ ತೊಟ್ಟುಕೊಂಡು
ಬಂಗಾರ। ಕೈಬೆರಳಾಗ ತುಂಬಿಕೊಂಡು । ಉಂಗುರ
ಕೊರಳಾಗಿದೆ ಗೋಪುಕಂಠೀಸರ। ಕಿವಿಯೊಳಗ ।
ಒಂಟೀಗಳ ವೈಯ್ಯಾರ । ರಟ್ಟೆ ಕಡಗಗಳ ಟಿಂಕಾರ ॥ ೧ ॥
ಇಷ್ಟು ಚಿನ್ನವ ಕೊಟ್ಟ ನಮ್ಮರಸರ। ಆಯುಷ್ಯವು ಬೆಳೆ।
ಯಲಿ ಸಾವಿರ । ತುಂಬಿಹೋಗಲಿ ಕೀರ್ತಿಯ ಡಂಗುರ ॥ ೨ ॥

**ನಳ:**—ಪಿಂಗಳಾ! ಏನು ನಮ್ಮ ಜಾಂಬುವಂತ ಮಹಾರಾಜರ ಭಾಗ್ಯವೊ? ಬಂಗಾರವೆಂದರೆ ಅವರ ಪಾಲಿಗೆ ಕಬ್ಬಿಣಕ್ಕಿಂತಲೂ ಕಡೆಯಾಗಿದೆ.

**ಪಿಂಗಳ:**—ಅಲ್ಲವೇ ಮತ್ತೆ, ಎಲೋ ನಮ್ಮಂತಹ ಸಾಮಾನ್ಯ ದೂತರು ಇಷ್ಟು ಚಿನ್ನಾಭರಣಗಳನ್ನು ಯಾವ ರಾಜನ ರಾಜ್ಯದಲ್ಲಿಟ್ಟುಕೊಂಡಿದ್ದಾರೋ?

**ನಳ:**—ಭೂಲೋಕದ ಸಮಾಚಾರವಿರಲಿ, ಸ್ವರ್ಗ ಲೋಕದ ಇಂದ್ರರಾಜನ ನಗರ ಪಾಲಕರಾದರೂ ನಮ್ಮಷ್ಟು ಚಿನ್ನಾಭರಣಗಳಿಂದ ಶೋಭಿಸುತ್ತಿರಲಿಕ್ಕಿಲ್ಲ.

**ಪಿಂಗಳ:**—ಬರುಬರುತ್ತಾ ಈ ನಮ್ಮ ರಾಜಧಾನಿಯು ಸುವರ್ಣಮಯವಾಗಿ ಹೋಗುವದೋ ಏನೋ?

**ನಳ:**—ಹಿಂದಕ್ಕೆ ತ್ರೇತಾಯುಗದಲ್ಲಿ ಆಗಿಹೋದ ಲಂಕಾಧೀಶ ರಾವಣನು ತನ್ನ ರಾಜಧಾನಿಯ ಕಟ್ಟಡಗಳನ್ನೆಲ್ಲಾ ಬರೇ ಬಂಗಾರದ ಇಟ್ಟಂಗಿಗಳಿಂದಲೇ ಕಟ್ಟಿಸಿದ್ದನಂತೆ! ಹಾಗೆಯೇ ನಮ್ಮ ಜಾಂಬುವಂತ ಮಹಾರಾಜರಾದರೂ ಅದೇ ವಿಚಾರದಲ್ಲಿ ತೊಡಗಿರುವರೋ ಏನೋ?

**ಪಿಂಗಳ:**—ನಳಾ! ಈಗ್ಗೆ ಎಷ್ಟೋ ವರ್ಷಗಳಿಂದಿಲ್ಲದ ಈ ಅಪರಿಮಿತ

ವಾದ ಭಾಗ್ಯನಿಧಿಯು ಜಾಂಬುವಂತ ಮಹಾರಾಜರಿಗೆ ಎಲ್ಲಿ ಸಿಕ್ಕಿರ ಬಹುದು ?

**ಸಳ** :—ಅದೇ ಗೂಢವು. ರಾಜ್ಯದಮೇಲೆ ಚಿನ್ನದ ಮಳೆಯು ಗರೆದಿದ್ದರೆ ಅದು ಎಲ್ಲ ಸ್ಥಳದಲ್ಲಿಯೂ ಕರೆಯಬಹುದಾಗಿತ್ತು. ಹಾಗೇನಾಗಿಲ್ಲ ಅಂದ ಬಳಿಕ ಈ ಚಿನ್ನದ ಹೊಳೆಯು ಅರಮನೆಯಲ್ಲಿ ಯಾವ ದಿಕ್ಕಿನಿಂದ ಹರಿದಿರಬಹುದು ?

**ಪಿಂಗಳ** :—ಇದೂ ಮತ್ತೂ ಗೂಢವಾದ ಸಮಾಚಾರವು. ಅಂತೂ ಬರ ಬರುತ್ತ ಈ ಗೂಢವು ತಾನಾಗಿಯೇ ಬೈಲಿಗೆ ಬರುವದು. (ತೆರೆಯು ಕಡೆ ನೋಡಿ) ಅದಾರೋ? ಈ ಇರ್ವರು ಪರನಾಡಿನ ಜನಗಳಾಗಿ ಕಾಣು ತ್ತಾರೆ.

**ಸಳ** :—ಅಹುದಹುದು. ಅವರಲ್ಲೊಬ್ಬನು ಎಷ್ಟು ತೇಜಸ್ವಿಯಾಗಿದ್ದಾನೆ. ಏನು ಅಜಾನುಬಾಹುವಾಗಿದ್ದಾನೋ?

**ಪಿಂಗಳ** :—ಅಹುದು ಕೇವಲ ರಾಜಪುರುಷನಾಗಿಯೇ ಕಾಣುತ್ತಾನೆ. ಇಂ ತಹ ಲಕ್ಷಣವಂತನನ್ನು ನಾನಿದುವರೆಗೂ ನೋಡಿಲ್ಲ.

**ಸಳ** :—ಅವರು ಕುಳಿತುಕೊಳ್ಳುವದಕ್ಕೇನಾದರೂ ತರುವಾ ಬಾ (ಕುಳಿತು ಕೊಳ್ಳುವದಕ್ಕೆ ಮರದ ಬುಡ್ಡೆಯನ್ನು ತಂದಿರಿಸುವರು ಇಷ್ಟರಲ್ಲಿ ಕೃಷ್ಣ, ವಿಜಯ ಇಬ್ಬರೂ ಒಂದು ಪರಿಯನ್ನು ನೋಡುವರು ಅಷ್ಟರಲ್ಲಿ.)

**ಇಬ್ಬರು** :—ಮಹಾಸ್ವಾಮೀ, ಚಿನ್ನ, ಚಿನ್ನ ಬಂಗಾರ. (ಬೇಡು ತೋರಿಸುವರು)

**ಕೃಷ್ಣ** :—ಅಯ್ಯಾ ಮಿತ್ರರೇ ನಿಮಗೆ ಚಿನ್ನದ ಪ್ರದರ್ಶನದ ಸಲುವಾಗಿ ಒಂದು ಮೇರೆಯನ್ನು ಕಲ್ಪಿಸಿಕೊಡುವೆವು ಅಲ್ಲಿ ನಿಂತುಕೊಳ್ಳಿ. ಮಿತ್ರಾ ಅವರಿಗೊಂದು ಮೇರೆಯನ್ನು ಕಲ್ಪಿಸಿಕೊಡು.

**ವಿಜಯ** :— (ಹಾಗೆ ಮೇರೆಯನ್ನು ಕಲ್ಪಿಸುವನು)

**ಕೃಷ್ಣ** :—ಅಯ್ಯಾ ! ಇದಾವ ನಗರವು ?

**ಸಳ** :—ಮಹಾಸ್ವಾಮೀ ! ಸಕಲ ಸಂಗತಿಗಳನ್ನೂ ಹೇಳುವೆವು ಮೊದಲು ಕುಳಿತುಕೊಳ್ಳಿ.

**ಕೃಷ್ಣ :**— (ಕುಳಿತುಕೊಳ್ಳುತ್ತ) ಬಹು ವಿನಯಶಾಲಿಗಳಾಗಿದ್ದಾರೆ. ಮಿತ್ರಾ ಕುಳಿತುಕೋ ಇತ್ತ.

**ಪಿಂಗಳ :**—ಸ್ವಾಮೀ! ಈತನು ತಮ್ಮ ಸೇವಕನೇನು?

**ಕೃಷ್ಣ :**—ಅಲ್ಲ. ಅಲ್ಲ. ಇವನು ನನ್ನ ಮಿತ್ರನು.

**ನಳ :**—ಏನಿದಾಶ್ಚರ್ಯ! ಚಿನ್ನ ಕಬ್ಬಿಣಗಳ ಮಿತ್ರತ್ವವಾದಂತಾಗಿದೆ?

**ವಿಜಯ :** ಅದೇನು ಹೀಗೆ ಹೇಳುವಿರಿ? ಆವೆರಡು ಲೋಹಗಳಲ್ಲವೇ? ದೂರವೇಕೆ? ಅಗೋ ನಿಮ್ಮ ಬೆರಳುಗಳಲ್ಲಿ ಚಿನ್ನದ ಉಂಗುರಗಳಿವೆ.

**ಇಬ್ಬರು :**— ಕಾಲುಗಳಲ್ಲಿ ಸಹಾ ಇವೆ.

**ವಿಜಯ :** ಆಹುದು, ಕಾಲುಗಳಲ್ಲಿ ಸಹ ಇವೆ ಆದರೆ ಕೈಯಲ್ಲಿ ಕಬ್ಬಿಣದ ಆಯುಧವಿದೆ.

**ಪಿಂಗಳ :**—ಲೋಹಗಳಾದರೂ ಅವುಗಳಲ್ಲಿ ತಾರತಮ್ಯವಿಲ್ಲವೇ?

**ವಿಜಯ :**—ತಾರತಮ್ಯಾನುಸಾರವಾಗಿಯೇ ಚಿನ್ನದಂತಿರುವ ನನ್ನ ಮಿತ್ರನು ಮೇಲಕ್ಕೆ ಕುಳಿತಿದ್ದಾನೆ. ಕಬ್ಬಿಣ ಸಮಾನನಾದ ನಾನು ಕೆಳಗೆ ಕುಳಿತಿದ್ದೇನೆ.

**ನಳ :**— ಸ್ವಾಮೀ ತಮ್ಮ ಮಿತ್ರರು ಚತುರರೂ ಮತ್ತು ಪ್ರಸಂಗಾವಧಾನಿಗಳಾಗಿದ್ದಾರೆ.

**ಕೃಷ್ಣ :**—ಅಂತೇ! ಅಂತಹ ಗುಣವುಳ್ಳ ಕಬ್ಬಿಣದಲ್ಲಿ ಈ ಚಿನ್ನವು ತನ್ನ ಮಿತ್ರತ್ವವನ್ನು ಬೆಳಿಸಿದೆ. ಅಸ್ತು ನಮ್ಮ ಪ್ರಶ್ನೆಗಳಿಗೆ ಸಮರ್ಪಕ ಉತ್ತರವನ್ನು ಕೊಡುವಿರಾ? ಇದಾವ ನಗರವು?

**ನಳ :**—ಇದು ಮಹಾ ಬಲಶಾಲಿಗಳಾಗಿಯೂ ಧೀರೋದಾತ್ತರಾಗಿರುವ ಜಾಂಬುವಂತ ಮಹಾರಾಜರ ರಾಜಧಾನಿಯು.

**ವಿಜಯ :**—ಯಾರು ಜಾಂಬುವಂತ ರಾಜನೇ? ತ್ರೇತಾಯುಗದ ಜಾಂಬುವಂತನು ಈ ದ್ವಾಪರ ಯುಗದಲ್ಲಿ ಎತ್ತಿಂದ ಬಂದನಯ್ಯಾ?

**ನಳ :**—ಅಯ್ಯಾ ಮಿತ್ರನೇ! ಅದೇ ಜಾಂಬುವಂತ ಮಹಾರಾಜರ ರಾಜ

ಧಾನಿಯೇ ಇದು. ಇದನ್ನಾಳುವ ದೊರೆಗಳಿಗೆ ಜಾಂಬುವಂತ ಮಹಾ ರಾಜರೆಂದೆನ್ನುವ ಪರಿಪಾಠವುಂಟು.

ಕೃಷ್ಣ — ಇದೊಂದು ದೇಶಾಚಾರವು. ಇರಲಿ ಮಿತ್ರರೇ! ನಿಮ್ಮ ರಾಜನು ಬಹು ಧರ್ಮವಂತನಿರಬಹುದಲ್ಲವೇ?

ಪಿಂಗಳ:— ಮಹಾಸ್ವಾಮೀ! ಧರ್ಮವಂತರೆಂದೇನು ಕೇಳುವಿರಿ? ಆರ್ಯಾವರ್ತದಲ್ಲಿ ಹಸ್ತಿನಾವತಿಯ ರಾಜಸ್ಥಾನದಲ್ಲಿ ಕರ್ಣರೆಂಬ ಒಬ್ಬ ರಾಜರಿದ್ದಾರಂತೆ, ಅವರು ಬಹೂ ಧರ್ಮವಂತರಂತೆ, ಅಂಥವರು ಸಹಾ ನಮ್ಮ ಜಾಂಬುವಂತ ಮಹಾರಾಜರಿಂದ ಧರ್ಮಪಾಠವನ್ನು ಕಲಿಯಬೇಕು. ಧರ್ಮಪಾಠವನ್ನು.

ವಿಜಯ:— ಅಬಬಬ ಅಂಥಾ ಧರ್ಮವಂತನೇ! ನಾವೇನಿದೂವರೆಗೂ ಈ ಜಾಂಬುವಂತ ರಾಜನ ಕೀರ್ತಿಯನ್ನು ಕೇಳಿಲ್ಲ?

ನಳ: ಅಯ್ಯಾ! ಕಾಡುಜನರ ಕೀರ್ತಿಯು ಜಗದಲ್ಲಿ ಹೇಗೆ ವಿಸ್ತಾರವಾಗಬೇಕು? ಒಂದು ಸಮಯ ವಿಸ್ತಾರವಾದರೂ ಮಿಕ್ಕ ರಾಜ್ಯದವರು ಅದನ್ನು ಕೇಳಿಯೂ ಕೇಳದಂತಿರುತ್ತಾರೆ. ಯಾಕೆಂದರೆ ಅವರ ಪಾಲಿಗೆ ನಾವು ಕಾಡುಜನರಾಗಿದ್ದೇವೆ.

ಪಿಂಗಳ:— ನಳಾ! ಅವರ ಹೇಳಿಕೆಯಂತೆ ನಾವೇನು ಕಾಡುಜನರಲ್ಲ. ಪರಿ ಪರಿ ಮೋಸದಿಂದ ಒಬ್ಬರನ್ನೊಬ್ಬರು ಕಾಡುವ ಅವರೇ ಕಾಡು ಜನರು.

ಕೃಷ್ಣ:— ಕಾಡುವ ಜನರು, ಕಾಡುಜನರು. ಸೈ ಸೈ. ಒಳಿತಾದ ಅಭಿಮಾನವು?

ವಿಜಯ:— ಅಯ್ಯಾ! ಮಿತ್ರರೇ ನೀವೀರ್ವರೂ ಒಳಿತಾಗಿ ಚಿನ್ನಾಭರಣಗಳಿಂದ ಮಂಡಿತರಾಗಿರುವಿರಿ. ನಿಮ್ಮ ದೇಶದ ಪೇಟೆಯಲ್ಲಿ ಚಿನ್ನವು ಬಹು ಅಗ್ಗವಾಗಿ ದೊರೆಯುತ್ತಿರುವದೇನು?

ನಳ:– ಅಯ್ಯಾ! ವಿದೇಶಿಯೇ! ನಮ್ಮ ದೇಶದ ಪೇಟೆಯಲ್ಲಿ ಚಿನ್ನವೇನೂ ಅಗ್ಗವಾಗಿ ಸಿಗುವದಿಲ್ಲ. ಅದು ನಮ್ಮ ಜಾಂಬುವಂತ ಮಹಾರಾಜರಿಂದ ನಮಗೆ ವಿಪುಲವಾಗಿ ಸಿಗುತ್ತೆ.

ಕೃಷ್ಣ :— ಏನು ನಿಮ್ಮ ವೀರರ ಮಟ್ಟಿಗೇನೇ ಸಿಗುತ್ತಿರುವದೇ ಅಥವಾ ಸಕಲ ಸೇವಕ ವರ್ಗಕ್ಕೂ ಸಿಗುತ್ತಿರುವದೇ ?

ಪಿಂಗಳ :— ಮಹಾಸ್ವಾಮಿ! ಸಕಲ ಸೇವಕ ವರ್ಗಕ್ಕೂ ಸಿಗುವದಲ್ಲದೇ ಅನೇಕ ಯಾಚಕ ವರ್ಗವೂ ಈ ಸುವರ್ಣದಾನವನ್ನು ಪಡೆದು ಧನ್ಯರಾಗಿ ಬಿಟ್ಟಿದ್ದಾರೆ.

ವಿಜಯ :—ಏನಿದೇ ? ಸುವರ್ಣವೇ ?

ನಳ :—ಅಹುದು ಇದೇ ಸುವರ್ಣವು ಮತ್ತೊಂದು ಬೇರೆಯಾದ ಸುವರ್ಣ ವಿರುವದೆ ?

ವಿಜಯ :—ನಮ್ಮ ದೇಶದವರು ದಸರೇ ಹಬ್ಬದಲ್ಲಿ ಬನ್ನಿಯ ತೊಪ್ಪಲಕ್ಕೆ ಬಂಗಾರವೆಂದು ಹೇಳಿ ಒಬ್ಬರಿಗೊಬ್ಬರು ಕಾಣಿಕೆಯಾಗಿ ಕೊಡುವ ರೂಢಿ ಯುಂಟು. ಹಾಗೇನಾದರೂ ಇರಬಹುದೆಂದು ಕೇಳಿದೆನು.

ಪಿಂಗಳ:—ಮಹಾಸ್ವಾಮೀ ತಮ್ಮ ದೇಶದಲ್ಲಿ ತೊಪ್ಪಲಕ್ಕೆ ಬಂಗಾರವೆಂದೂ ಕಲ್ಲಿಗೆ ಬೆಳ್ಳಿಯೆಂದೂ ಸುಳ್ಳು ಹೆಸರನ್ನಿಟ್ಟುಕೊಂಡಿರಬಹುದು. ನಾವು ಮಾತ್ರ ಹಾಗೆ ಮಾಡೆವು. ಚಿನ್ನಕ್ಕೆ ಚಿನ್ನವೆಂದೂ ಮಣ್ಣಿಗೆ ಮಣ್ಣೆಂದೂ ಯಥಾರ್ಥವಾಗಿ ಹೇಳುವೆವು.

ಕೃಷ್ಣ :—ಯಾಕೆಂದರೆ ಇವರು ಕಾಡುಜನರು.

ನಳ :— ಹಾಂ ಹಾಗೆನ್ನಬೇಡಿ. ಯಾಕೆಂದರೆ ನಾವು ಈಗ್ಗೆ ಕೃತಿಯಲ್ಲಿ ಆರ್ಯರನ್ನೇ ಅನುಸರಿಸಿದ್ದೇವೆ.

ಕೃಷ್ಣ :—ಅದಿರಲಿ ಮಿತ್ರರೇ! ನಿಮ್ಮ ರಾಜನು ಅನಾದಿಕಾಲದಿಂದಲೂ ಹೀಗೆಯೇ ಬಂಗಾರದ ಬಳಕೆಯ ಕ್ರಮವನ್ನಿಟ್ಟಿರುವನೇ ?

ನಳ :—ಅದೇನಿಲ್ಲ ಸ್ವಾಮೀ, ಈಗ್ಗೆ ಎರಡು ತಿಂಗಳುಗಳಿಂದ ಮಾತ್ರ ಹೀಗೆ ತಮ್ಮ ಪ್ರಜಾವರ್ಗದ ಮೇಲೆ ಚಿನ್ನದ ಮಳೆಗರೆಸುತ್ತಿದ್ದಾರೆ.

ಕೃಷ್ಣ :—ತತ್ಪೂರ್ವದಲ್ಲಿ ಹೇಗೆ ಮಾಡುತ್ತಿದ್ದರು. ಇದೋ ಮಿತ್ರರೇ ವಿಶೇಷ ಸಂಗತಿಗಳನ್ನು ಕೇಳುತ್ತಿರುವೆವೆಂದು ಸಂಶಯವನ್ನು ಮಾತ್ರ ತಳ್ಕೊಳ್ಳಲಾಗದು.

ಇಬ್ಬರು :—ಉಂಟೇ, ಸ್ವಾಮೀ.

ಕೃಷ್ಣ :—ಪ್ರವಾಸಿಗಳಾದ ನಾವು ವಿದೇಶದೊಳಗಿನ ಚಮತ್ಕಾರವಾದ ನೋಟಗಳನ್ನು ನೋಡುತ್ತಲೂ ಸುದ್ದಿ ಸಮಾಚಾರಗಳನ್ನು ತಿಳಿದುಕೊಳ್ಳುತ್ತಲೂ ನಮ್ಮ ಮನರಂಜನೆಯನ್ನು ಮಾಡಿಕೊಳ್ಳುವದಲ್ಲದೇ ಸ್ವದೇಶಕ್ಕೆ ಹೋದ ಮೇಲೆ ನಮ್ಮ ಪ್ರವಾಸದ ವೃತ್ತಾಂತವನ್ನು ಸ್ವಜನರಿಗೆ ತಿಳಿಹಿಸಿ ಅವರಲ್ಲಿ ಸಹ ಆನಂದಾಶ್ಚರ್ಯಗಳನ್ನುಂಟುಮಾಡುತ್ತೇವೆ.

ಪಿಂಗಳ.—ತಾವೇನಾದರೂ ಮಾಡಿಕೊಳ್ಳಿ. ನಾವು ಮಾತ್ರ ತಿಳಿದಷ್ಟು ಹೇಳುವೆವು. ಎಲೊ ನಳಾ! ಏನೆಂದು ಕೇಳಿದರೋ?

ನಳ :—ಎರಡು ತಿಂಗಳುಗಳಿಂದ ಸುವರ್ಣವನ್ನು ಕೊಡುತ್ತಲಿದ್ದಾರೆ ತತ್ಪೂರ್ವದಲ್ಲಿ ಜಾಂಬುವಂತ ಮಹಾರಾಜರು ಸೇವಕ ಪರಿವಾರಕ್ಕೆ ಪಾರಿತೋಷಕವಾಗಿ ಏನು ಕೊಡುತ್ತಿದ್ದರೆಂದು ಕೇಳಿದರಲ್ಲವೇ ?

ಇಬ್ಬರೂ:—ಅಹುದು ಅಹುದು;

ಪಿಂಗಳ :—ತತ್ಪೂರ್ವದಲ್ಲಿ ಧಾನ್ಯವನ್ನೂ ವಸ್ತ್ರವನ್ನೂ ಗೋಧನವನ್ನೂ ಕೊಟ್ಟು ಪಾಲಿಸುತ್ತಿದ್ದರು.

ವಿಜಯ :—ಎರಡೇ ಎರಡು ತಿಂಗಳುಗಳಲ್ಲಿ ವ್ಯವಹಾರದಲ್ಲಿ ಭೂಮ್ಯಾಕಾಶದಷ್ಟು ಬದಲಾವಣೆಯು ಹೇಗಾಯಿತು ?

ಇಬ್ಬರೂ :—ಆ ವಿಷಯವು ನಮ್ಮಲ್ಲಿಯೂ ಕೂಡ ಆಶ್ಚರ್ಯವನ್ನುಂಟು ಮಾಡಿದೆ.

ಕೃಷ್ಣ :—ಅಯ್ಯಾ! ನಮಗೆ ನಿಮ್ಮ ರಾಜನ ದರ್ಶನವಾಗಬಹುದೇನು ?

ನಳ :—ಆಗದೇನು? ನಮ್ಮ ಮಹಾರಾಜರು ಕೇವಲ ಧಾರಾಳಿಗಳಿದ್ದಾರೆ ಹೇಗೆ ದೇವಾಲಯದೊಳಗಿನ ದೇವರ ದರ್ಶನವು ಸುಲಭ ಸಾಧ್ಯವೋ ಹಾಗೆಯೇ ನಮ್ಮ ಜಾಂಬುವಂತ ಮಹಾರಾಜರ ದರ್ಶನವಾದರೂ ಸುಲಭ ಸಾಧ್ಯವಿದೆ.

ವಿಜಯ :—ಇದಾದರೂ ಆಶ್ಚರ್ಯದ ಸಂಗತಿಯೇ.

ಇಬ್ಬರೂ :—ಅದೇಕೆ?

**ವಿಜಯ** :—ರಾಜದ್ವಾರದಲ್ಲಿ ಕಾವಲು ಕಟ್ಟುಗಳಿಲ್ಲವೇ ?

**ಪಿಂಗಳ** :—(ನಕ್ಕು) ಏನು ಸ್ವಾಮೀ! ರಾಜಭುವನಕ್ಕೂ, ರಾಜನಿಗೂ ಕಾವಲು ಕಟ್ಟುಗಳೇ? ರಾಜಭುವನವೆಂದರೆ ಕಾರಾಗೃಹವೇ?

**ಕೃಷ್ಣ** :—ಮಿತ್ರಾ ಇದು ಮಾತ್ರ ಶ್ರೇಷ್ಠವಾದ ಆಡಳಿತ ಕ್ರಮವು.

ರಾಗ—ಹಂಸಧ್ವನಿ—ತಾಲ—ದಾದರ

॥ **ಪದ** ॥ ಧನ್ಯನು ಈ ಶಾಸನ ಭುವಿಯನ್ನು ಪಾಲಿಪಾ । ನೃಪನೂ ॥ ಪಲ್ಲ ॥
ಅನುಭವಿಸುವ ಶಾಸನವನೂ । ಇಹದಿ ॥
ಸ್ವರ್ಗಸೌಖ್ಯವನೂ ॥ ಅ ॥ ಪಲ್ಲ ॥
ಅರಸನು ದೇವರ ಸಮನು ।
ಅರಮನೆ ದೇವಾಲಯು । ಸಮವಾಗಿಹುದೀ ದೇಶವೊಳಿರು ।
ವ ಭಾಗ್ಯವಂತರಿಗೇ ॥ ೧ ॥

ಅಸ್ತು ಮಿತ್ರರೇ! ಈಗ್ಗೆ ನಮಗೆ ನಿಮ್ಮ ರಾಜನ ದರ್ಶನವು ಎಲ್ಲಿಯಾಗಬಹುದು?

**ನಳ**.—ಆ ವಿಷಯವನ್ನು ಅರಮನೆಗೆ ಹೋಗಿ ಯಾರನ್ನಾದರೂ ಕೇಳಿದರೆ ಅವರು ಹೇಳುವರು.

**ಪಿಂಗಳ** :—ಹೋಗಿ ಹೋಗಿ ಮಹಾರಾಜರನ್ನು ಕಂಡುಕೊಳ್ಳಿ ವಿಪುಲವಾಗಿ ಸುವರ್ಣವು ಸಿಕ್ಕುವದು ಯಾಚಿಸುವಾಗ್ಗೆ ದಾಕ್ಷಿಣ್ಯವು ಬೇಡ. ಬೇಡಿದಷ್ಟು ಕೊಡುವರು.

**ಕೃಷ್ಣ**:—ಆಗಲಿ ನಮ್ಮ ಲಭ್ಯದಲ್ಲಿ ಹೇಗಿರುವದೋ ಅದನ್ನಾರು ಕಂಡವರು? ನಡೆ ವಿಜಯಾ ?

**ಪಿಂಗಳ** :—ಏನು ಏನು ಸ್ವಾಮೀ ತಮ್ಮ ಮಿತ್ರರ ಹೆಸರು ವಿಜಯವೇ?

**ಕೃಷ್ಣ** :—ಅಹುದು ಅದೇಕೆ?

**ಪಿಂಗಳ** :—ನೋಡಿ ನೋಡಿ ವಿಜಯವು ಸಂಗಡ ಇರುವಾಗ್ಗೆ ಯಾವ ಕಾರ್ಯದಲ್ಲಾದರೂ "ಅಜಯ" ವಾಗಬಹುದೇ?

ಕೃಷ್ಣ :—ಮಿತ್ರಾ ಬಹು ಕುಶಲರಿದ್ದಾರೆ ಆಗಲಿ. ನಾವು ಬರುವೆವು (ಹೋಗುವರು)

(ಪ್ರವೇಶ-ಅರಮನೆಯ ಒಂದು ಭಾಗ)

ವಿಜಯ :—ಕೃಷ್ಣಯ್ಯಾ ? ಕಾಡುಜನರ ರಾಜ್ಯದಲ್ಲಿ ಬೇಡಿದಷ್ಟು ಬಂಗಾರವು ಸಿಗುತ್ತಿರುವದು ; ಇದರ ಗೂಢವೇನು ?

ಕೃಷ್ಣ :—ಅದನ್ನೇ ಯೋಚಿಸುತ್ತಲಿದ್ದೇನೆ. ನಿತ್ಯದಲ್ಲೂ ಧಾರಾಳವಾದ ಸುವರ್ಣವನ್ನು ಕೊಡುವ ಶ್ಯಮಂತಕ ಮಣಿಯೇನಾದರೂ ಈ ಕಾಡು ರಾಜನಾದ ಜಾಂಬುವಂತನ ಕೈಸೇರಿರಬಹುದೇ ?

ವಿಜಯ :—ಇದ್ದರೂ ಇರಬಹುದು. ಆ ಶ್ಯಮಂತಕ ಮಣಿಯೊಡನೆ ಪ್ರಸೇನನು ಮಾಯವಾದಕಾಲಕ್ಕೂ, ಜಾಂಬುವಂತನ ಅರಮನೆಯಿಂದ ಚಿನ್ನವು ಹೊರಬೀಳುತ್ತಿರುವ ಕಾಲಕ್ಕೂ, ತಾಳೆಯನ್ನು ಹಾಕಿ ನೋಡಿದರೆ ಶ್ಯಮಂತಕ ಮಣಿಯು ಇಲ್ಲಿಯೇ ಇರಬಹುದೆಂಬ ಸಂಗತಿಗೆ ಸರಿಯಾಗಿ ಮೇಳೆಗಲೆಯುವದು.

ಕೃಷ್ಣ :—ನಿಜ. ನೀನು ಹೇಳುವದು ಕೇವಲ ನಿಜ. ಈಗ್ಗೆ ಎರಡು ತಿಂಗಳುಗಳಿಂದ ಜಾಂಬುವಂತ ರಾಜನು ಹೀಗೆ ವಿಪುಲವಾಗಿ ಸುವರ್ಣದಾನ ಮಾಡುತ್ತಲಿದ್ದಾನೆಂದು ನಗರ ರಕ್ಷಕ ಮಿತ್ರರು ಹೇಳಲಿಲ್ಲವೇ ?

ವಿಜಯ :—ಅಹುದು ಪ್ರಸೇನನು ಮಾಯವಾಗಿಯಾದರೂ ಅಷ್ಟೇ ದಿನಗಳಾದವು.

ಕೃಷ್ಣ :—ಇನ್ನುಮೇಲೆ ಯೋಚಿಸುವದೇ ಬೇಡ ; ಆ ಮಣಿಯು ಇಲ್ಲಿಯೇ ಇದೆ.

ವಿಜಯ :—ಹಾಗಾದರೆ ? ಅದನ್ನು ಸ್ವಾಧೀನಪಡಿಸಿಕೊಳ್ಳುವದು ಹೇಗೆ ? ತನಗೆ ಸಿಕ್ಕ ಸೌಭಾಗ್ಯದಾಯಕ ಮಣಿಯನ್ನು ಆ ಜಾಂಬುವಂತ ರಾಜನು ಕೊಡುವನೇ ?

ಕೃಷ್ಣ :—ಸಾಮೋಪಚಾರದಿಂದ ಕೊಡದಿದ್ದರೆ ಕೊನೆಯ ಉಪಾಯವಂತೂ ಇದ್ದೇ ಇದೆ.

ವಿಜಯ :—ಅಪಾಯ ಕೊನೆಯ ಉಪಾಯವಷ್ಟೆ ?

ಕೃಷ್ಣ :—ಬಲಾತ್ಕಾರ ? ... ... ...

ವಿಜಯ :—ಏನು ಬಲಾತ್ಕಾರವೇ ?

ಕೃಷ್ಣ :—ಅಹುದು

ವಿಜಯ :—ಏನು ಕಾಡುರಾಜನಾದ ಜಾಂಬವಂತನಗೂಡ ಬಲಾತ್ಕಾರವೇ ?

ಕೃಷ್ಣ :—ಅಹುದು ಏತಕ್ಕೆ ಮಾಡಲಾಗದೊ ?

ವಿಜಯ :—ಕೃಷ್ಣಯ್ಯಾ ? ನೀನು ಮಾಡುವದು ಕೇವಲ ಸಾಹಸದ ವಿಚಾರವು. ಏಕಾಂಗಿಯಾಗಿ ಯಾರ ಬೆಂಬಲವಿಲ್ಲದೇ ಹೋಗಿ ನೀನು ಈ ಕಾಡು ರಾಜನಗೂಡ ಹೋರಾಡುವಿಯಾ?

ಕೃಷ್ಣ :—ಅದೇನು ಹೀಗೆ ಹೇಳುವಿ. ನನಗೆ ನಿನ್ನ ಬೆಂಬಲವಿರುವದಿಲ್ಲವೇ ? ಹಾಗೆ, ನಿನ್ನಿಂದಲೇ ನಾನವನೊಡನೆ ಹೋರಾಡಿ ಜಯಿಸುವೆನು.

ವಿಜಯ :—ಏನು ? ಕದನದಲ್ಲಿ ನಾನು ನಿನಗೆ ಬೆಂಬಲನಾಗಿ ನಿಲ್ಲಬೇಕೊ ?

ಕೃಷ್ಣ :—ಅಹುದು ಏತಕ್ಕೆ ನಿಲ್ಲಲಾಗದೋ ?

ವಿಜಯ :—ಮೊದಲು ದ್ವಾರಕೆಗೆ ಹೋಗುವಾ ನಡೆ.

ಕೃಷ್ಣ :—ಏನು ಸ್ಯಮಂತಕ ಮಣಿಯನ್ನು ಕೊಡದೇ ?

ವಿಜಯ :—ಆ ಸ್ಯಮಂತಕ ಮಣಿಯ ಶೋಧವನ್ನು ಮಾಡುವದಷ್ಟೇ ನಿನ್ನ ಪ್ರತಿಜ್ಞೆಯು. ಅದನ್ನು ತಂದು ಸತ್ರಾಜಿತನಿಗೆ ಕೊಡುವದಕ್ಕೆ ನೀನು ಒಪ್ಪಿಲ್ಲ. " ಇಂಥ ಮಣಿಯು ಇಂಥಲ್ಲಿದೆ. ಬೇಕಾದರೆ ತಂದು ಕೊಳ್ಳಿ. ಸಾಕಾದರೆ ಬಿಟ್ಟುಕೊಡಿ. " ಎಂದು ಹೇಳಿ ಅಪವಾದದಿಂದ ಮುಕ್ತನಾಗುವದನ್ನು ಬಿಟ್ಟು ಯುದ್ಧವಂತೆ, ಜಗಳವಂತೆ, ಇಲ್ಲಿಲ್ಲದ ಹೇಚಾಟವನ್ನು ಮೈಮೇಲೆ ತೆಗೆದುಕೊಂಡು ಗೋಳಾಡುವದಕ್ಕೆ ನಿನಗಾರು ಹೇಳಿದರಯ್ಯಾ ?

**ಕೃಷ್ಣ** :—ಯಾರು ಹೇಳುವದೂ ಬೇಡ. ಕೇಳುವದೂ ಬೇಡ. ಆ ಮಣಿಯು ಈ ಜಾಂಬುವಂತ ರಾಜನಲ್ಲಿದ್ದದ್ದೇ ನಿಜವಾದರೆ ಅದನ್ನು ಯಾವ ಕಾಲಕ್ಕೂ ಬಿಡುವದಿಲ್ಲ. ಅದಕ್ಕಾಗಿ ಬೇಕಾದಷ್ಟು ರಕ್ತಪಾತವಾಗಲಿ.

**ವಿಜಯ** :—ಏನು ನಿನ್ನ ಸಹವಾಸವಾಯಿತಪ್ಪ! ಸುಖವಾಗಿ ಉಂಡುಟ್ಟು ಮನೆಯಲ್ಲಿದ್ದುಕೊಂಡು ಪಾರ್ಥಿಕ್ಯವನ್ನು ಕಳೆಯುವ ನನ್ನನ್ನು ಇಂತಹ ಪರಿತಾಪಕ್ಕೆ ಗುರಿಮಾಡುವದಕ್ಕಾಗಿಯೇ ಜತೆಯಲ್ಲಿ ಕರೆದು ಕೊಂಡು ಬಂದಿಯೇನು ?

**ಕೃಷ್ಣ** :—ಇದೇನು ಹೀಗೆ ಹೇಳುವಿ ? ಜತೆಯಲ್ಲಿ ಬರುವದಕ್ಕೆ ನಾನು ನಿನಗೆ ಆಗ್ರಹವನ್ನು ಮಾಡಿದೆನೇ ? ಬೇಡವೆಂದರೂ ಕೇಳದೇ ಸುಖದುಃಖಾ ದಿಗಳಲ್ಲಿ ನಾನು ನಿನ್ನ ಸಂಗಡಿಗನು, ನಾನು ಬಾಲಮಿತ್ರನು, ಎಂದು ಬಣ್ಣದ ಮಾತುಗಳನ್ನು ಸುರಿಸಿ ಆಗ್ರಹಪಟ್ಟು ನೀನಾಗಿಯೇ ನನ್ನ ಸಂಗಡ ಬಂದಿಯಲ್ಲವೇ ?

**ವಿಜಯ** :—(ಸ್ಮರಿಸಿ) ಅಹುದು ಈಗ್ಗೆ ನೆನಪಾಯಿತು. ಸುಖದುಃಖ ಗಳಲ್ಲಿ ನಿನ್ನ ಸಂಗಡಿಗನೆಂದು ಹೇಳಿದ್ದೇನೋ ನಿಜ. .... ... ...

**ಕೃಷ್ಣ** :—ಹಾಗಾದರೆ ಅನುಮಾನವೇನು ?

**ವಿಜಯ** :—ಆದರೆ ಇಂಥಿಂಥ ಸುಖಗಳೂ, ಇಂಥಿಂಥ ಕಷ್ಟಗಳೆಂದೂ ಮಾತ್ರ ಪರಿಷ್ಕಾರವನ್ನು ಮಾಡಿಕೊಂಡಿಲ್ಲ. ಅದು ಕೊಂಚ ತಪ್ಪಾ ಯಿತು.

**ಕೃಷ್ಣ** :—ಆದ ತಪ್ಪನ್ನು ತಿದ್ದಿಕೊಳ್ಳುವದಕ್ಕಾದರೂ ನೀನು ನನ್ನ ಜತೆ ಯಲ್ಲಿ ನಡೆಯಲೇಬೇಕು.

**ವಿಜಯ** :—ಗ್ರಹಚಾರವನ್ನು ಚನ್ನಾಗಿ ಕೇಳಿಕೊಳ್ಳದೇ ನಿನಗೆ ವಚನ ವನ್ನು ಕೊಟ್ಟೆನು. ಆಗಲಯ್ಯಾ ಮಾಡತಕ್ಕದ್ದೇನು? ಆಗುವದೆಲ್ಲ ಆಗಲಿ.

**ಕೃಷ್ಣ** :—ಹೀಗೆ ಹೇಳಿ ಸುಮ್ಮನೇ ಬರಬಾರದೇ ? ಜತೆಯಲ್ಲಿ ?

**ವಿಜಯ** :—ಆಗಲಯ್ಯಾ! ನೀನೇನು ತಿಳಿದದ್ದು ಮಾಡು. ಆದರೆ

ಕೃಷ್ಣಯ್ಯಾ! ಯುದ್ಧಪ್ರಸಕ್ತಿಯೊಂದನ್ನು ಬಿಟ್ಟು ಮತ್ತಾವ ಉಪಾಯ ವನ್ನಾದರೂ ಮಾಡಬೇಕು.

**ಕೃಷ್ಣ** :—ಮತ್ತಾವ ಉಪಾಯವನ್ನು ಮಾಡಲಿ? ಹೇಳು ನೋಡುವಾ?

**ವಿಜಯ** :—ಮೊದಲು ಆ ಮಣಿಯು ನಮ್ಮದು, ಪ್ರಯುಕ್ತ ಕೊಡೆಂದು ಕೇಳಬೇಕು.

**ಕೃಷ್ಣ** :—ಕೊಡದಿದ್ದರೆ?

**ವಿಜಯ** :—ದಾನವನ್ನಾದರೂ ಕೊಡೆಂದು ಕೇಳಬೇಕು?

**ಕೃಷ್ಣ** :—ಅದಕ್ಕೂ ಕೊಡದಿದ್ದರೆ?

**ವಿಜಯ** :—ಆ ಮಣಿಯನ್ನವನು ಎಲ್ಲಿಡುತ್ತಿರುವನೆಂಬುವನ್ನು ತಿಳಿದು ಕೊಂಡು ರಾತ್ರಿ ಸಮಯದಲ್ಲಿ ಕದ್ದು ತರಬೇಕು.

**ಕೃಷ್ಣ** :—ಏನು? ಕದ್ದು ತರಬೇಕೇ?

**ವಿಜಯ** :—ಅದುದು ಕೊಂಚವಾದರೂ ಸಪ್ಪಳವಾಗದಂತೆ ಕದ್ದು ತರ ಬೇಕು?

**ಕೃಷ್ಣ** :—ಯಾರಿಗೇನು ಹೇಳುವೆ?

**ವಿಜಯ** :—ನಾನು ನಿನಗೆ ಶ್ಯಮಂತಕ ಮಣಿಯನ್ನು ಕದ್ದು ತರಬೇ ಕೆಂದು ಹೇಳಿದೆನು.

**ಕೃಷ್ಣ** :—ಸಾಕುಮಾಡು ಶತಮೂರ್ಖನೆ! ಕಳವಿನಂಥ ಹೀನ ಕೆಲಸವನ್ನು ಮಾಡಲೊ?

**ವಿಜಯ** :—ಪಾಪ. ಪಾಪ. ಎಂದೂ ಕಳವು ಮಾಡಿದವನೇ ಅಲ್ಲ. ಚಿಕ್ಕಂದಿಗಳಿಗಿಂತಲೂ ಹೆಚ್ಚಾಗಿ ಹಾಲು, ಮೊಸರು, ಬೆಣ್ಣೆಗಳನ್ನು ಕದ್ದು ಗೆಳೆಯರಿಗೆಲ್ಲ ಹಂಚುತ್ತ ಕಾಲಹರಣ ಮಾಡಿದರಾರೊ?

**ಕೃಷ್ಣ** :—ವಿಜಯಾ! ಬಾಲ್ಯದಲ್ಲಿ ಹಾಗೆ ಮಾಡಿದೆನೆಂದ. ಈಗಲೂ ಅದನ್ನೇ ಅನುಸರಿಸಲಾಗುವದೇ?

**ವಿಜಯ** :—ಏಕೆ? ಅನುಸರಿಸಲಾಗದು? ಚಿಕ್ಕ ವಯಸ್ಸಿನಲ್ಲಿ ಚಿಕ್ಕ ಚಿಕ್ಕ

ಕಳವುಗಳು. ತಾರುಣ್ಯದಲ್ಲಿ ಅದಕ್ಕೆ ತಕ್ಕಂತೆ ಕಳವುಗಳು. ಈಗಿನ ಪ್ರೌಢಾವಸ್ಥೆಯಲ್ಲಿ ಇದಕ್ಕೆ ತಕ್ಕಂತೆ ಕಳವು ಮಾಡಿದರೆ ತಪ್ಪೇನು?

ಕೃಷ್ಣ :—ಸಾಕುಮಾಡು. ವೃದ್ಧಾಪ್ಯ ಮೂಲಕ ಬುದ್ಧಿಯು ನಿನ್ನನ್ನು ಬಿಟ್ಟುಹೋಗಿರುವದು.

ವಿಜಯ :—ಹಾಗೆ ಹೋದದ್ದಕ್ಕಾಗಿಯೇ ಹೀಗೆ ನಿನ್ನನ್ನು ಅನುಸರಿಸಿದ್ದೇನೆ.

ಕೃಷ್ಣ :—ವಿಜಯಾ! ಖಂಡಿತವಾಗಿ ಹೇಳಿಬಿಡು. ಸ್ಯಮಂತಕ ಮಣಿಯನ್ನು ವಶಪಡಿಸಿಕೊಳ್ಳುವ ಕಾರ್ಯದಲ್ಲಿ ನೀನು ನನಗೆ ಸಹಾಯಕನಾಗಿರುವದಾದರೆ ಇರು. ಇಲ್ಲವಾದರೆ ಈಕ್ಷಣವೇ ದ್ವಾರಕೆಗೆ ನಡೆ. ನನಗೆ ಯಾರ ಸಹಾಯವೂ ಬೇಡ. ಜಗದೀಶನ ಸಹಾಯವೊಂದಿದ್ದರೆ ಸಾಕು. ಈ ಜಗದ ಜತೆಗಾರರೆಲ್ಲರೂ ಸುಖದ ಜತೆಗಾರರು ಕಷ್ಟಕಾಲದಲ್ಲಿ ಯಾರಿಗೆ ಯಾರೂ ಇಲ್ಲ. ಇನ್ನು ಮೇಲೆ ಯಾರನ್ನು ಸ್ತುತಿಸುವದೂ ಬೇಡ ನಿಂದಿಸುವದೂ ಬೇಡ. (ಯೋಚಿಸುವನು.)

“ಅವಶ್ಯಮನುಭೋಕ್ತವ್ಯಂ”

“ಕೃತಂ ಕರ್ಮ ಶುಭಾಶುಭಂ”

ನಡೆ ಹಿಂತಿರುಗಿ ನೀನು ನನ್ನಗೂಡ ಬರುವದೇ ಬೇಡ.

ವಿಜಯ :— ಕೃಷ್ಣಯ್ಯಾ (ಅಳುತ) ನಾನು ನನ್ನ ಧೀರಸ್ವಭಾವಕ್ಕನುಸರಿಸಿ ನುಡಿದ ಮಾತುಗಳಿಗೆ ನೀನಿಷ್ಟು ಕೋಪಗೊಂಡೆಯಾ? ಇದೋ ತಪ್ಪಾಯಿತು. ತಿರಿಗಿ ನಿನ್ನ ವಿಚಾರಗಳಿಗೆ ಪ್ರತಿಯಾಡಲಿಕ್ಕಿಲ್ಲ. ಯಾವ ಸಮಯದಲ್ಲಿ ಯಾವ ಕಾರ್ಯವನ್ನು ಹೇಳುವೆಯೋ ಅದೇಕ್ಷಣದಲ್ಲಿಯೇ ಆ ಕೆಲಸವನ್ನು ಮಾಡುವೆನು. ಕಷ್ಟನಷ್ಟಾದಿಗಳ ಪರವೆಯನ್ನು ಮಾಡಲಿಕ್ಕಿಲ್ಲ. ಇನ್ನಾದರೂ ಶಾಂತನಾಗು ಮತ್ತು ಮೊದಲಿನಂತೆ ನನ್ನನ್ನಾದರಿಸು.

ಕೃಷ್ಣ :— (ಸ್ಮಿತಹಸಿ) ವಿಜಯಾ! ನನ್ನ ಜೀವದ ಜತೆಗಾರನಾದ ನೀನು ಹೀಗೆ ನಿರ್ಧಾರವನ್ನು ಮಾಡಿದ್ದಕ್ಕೆ ನನಗೆ ತುಂಬಾ ಸಂತೋಷವಾಯಿತು. ನೋಡುತ್ತಿರು ಆ ಸ್ಯಮಂತಕ ಮಣಿಯನ್ನು ಶೋಧಿಸಿ ವಶ

ಪಡಿಸಿಕೊಳ್ಳುವ ಕಾರ್ಯದಲ್ಲಿ ಹೇಗೆ ಯಶಸ್ವಿಯಾಗುವೆನು ?

ವಿಜಯ :—ನಿಜ. ಹಾಗಾಗುವದೇ ನಿಜ. ಕೃಷ್ಣಯ್ಯಾ ನಿನ್ನ ಉದಾತ್ತ ವಿಚಾರಗಳ ಭಾವವು ಮಂಕುಮತಿಯಾದ ನನಗೆ ತಿಳಿಯದ್ದಕ್ಕೆ ಸಮಯಾನುಸಾರ ಹೀಗೇನಾದರೂ ವಿರೋಧಭಾವದ ಮಾತುಗಳನ್ನಾಡುತ್ತೇನೆ ಮಾತ್ರ ಎಂದಾದರೂ ಮಾತಿನಂತೆ ಕೃತಿಯಾಗಿರುವದೇ! ಹೇಳು ನೋಡುವಾ ?

ಕೃಷ್ಣ :—ಹಾಗೆ ಕೃತಿಯಾಗದಿದ್ದರೂ ಮಾತುಗಳಿಂದ ಮಹಾತ್ಕಾರ್ಯದಲ್ಲಿ ತೊಡಗಿದ ಮುಂದಾಳುವಿನ ಮನವನ್ನು ಕಲುಷಿತ ಮಾಡುವದಾದರೂ ಒಂದು ಅಪರಾಧವೇ; ಎಲೋ,

**“ಚಿರಂ ಜಲನಿಧೌ ಮಗ್ನಾ, ಮೈನಾಕ ಇವ ಮಾರ್ದವ”**

ಎಂಬಂತೆ ಬಾಲ್ಯದಾರಭ್ಯ ನೀನು ನನ್ನ ಜತೆಯಲ್ಲಿದ್ದರೂ ಮದ್ದು ಬುದ್ಧನಾಗಿರುವಿ. ಇದೊಂದು ನಿನ್ನ ಅಪರಾಧವಲ್ಲವೇ ?

**ವಿಜಯ** :—ಹೌದು ಅಪರಾಧವೇನೋ ನಿಜ. ಆದರೆ ಒಂದು ಮಾತ್ರ ವಿಚಾರಣೀಯವಾದ ಸಂಗತಿಯು.

ಕೃಷ್ಣ :—ಅದೇನು ?

**ವಿಜಯ** :—ಅದೇನೆಂದರೆ! ಬಾಲ್ಯದಾರಭ್ಯ ನಾನು ನಿನ್ನ ಜತೆಯಲ್ಲಿದ್ದರೂ ಬುದ್ಧಿಶಾಲಿಯಾಗದಿರುವದಕ್ಕೆ ನಿನ್ನ ಶಿಕ್ಷಣ ಕ್ರಮವಾದರೂ ಸದೋಷವಾದದ್ದು.

ಕೃಷ್ಣ :—ಆಯಿತಾಯಿತು ನನ್ನ ಮಾತು ನನಗೇನೇ ತಿರುಗಿಸಿದಿಯಾ! ಅಸ್ತು ಈಗಲಾದರೂ ಜಾಗರೂಕನಾಗಿರುವಿಯೋ ಇಲ್ಲವೋ ?

**ವಿಜಯ** :—ಅದು ಕೃತಿಯಿಂದ ಮುಂದೆ ತಾನೇ ಗೊತ್ತಾಗುವದು.

**ಕೃಷ್ಣ** :—ಹಾಗಾದರೆ ನಡೆ ಇಲ್ಲಿಯ ರಾಜನನ್ನು ಕಾಣುವಾ! (ಹೋಗುವರು)

(ಪ್ರವೇಶ—ಜಾಂಬುವಂತನ ಅರಮನೆಯ ಒಂದು ಭಾಗ)

**ರೋಹಿಣಿ** :—ಕೃತ್ತಿಕೇ! ಇದೇನು? ಜಾಂಬುವಂತೀ ದೇವಿಯವರ ನೂತನವಾದ ಚಿನ್ನಾಭರಣಗಳನ್ನು ಅವರ ಮೈಮೇಲಿಡದೇ ಹಾಗೇ

ಕಯ್ಯಲ್ಲಿ ಹಿಡಿದುಕೊಂಡು ಆಲೆದಾಡುತ್ತಿರುವೆಯಲ್ಲಾ ? ಜಾಂಬುವಂತ ಮಹಾರಾಜರು ನಿನಗೇನು ಹೇಳಿದರು ?

**ಕೃತ್ತಿಕೆ** :—ತಂಗಿ ! ರೋಹಿಣಿ ! ನೀನು ಹೇಳುವದೇನೋ ನಿಜ. ಆದರೆ ಜಾಂಬುವತೀ ದೇವಿಯವರು ಈ ಆಭರಣಗಳನ್ನು ತೊಡದಿರುವಲ್ಲಿ ನನ್ನ ದೇನು ಅಪರಾಧವು.

**ರೋಹಿಣಿ** :—ಏಕೆ ? ರಾಜಪುತ್ರಿಯು ಇವುಗಳನ್ನು ಧರಿಸಲಿಲ್ಲವೇ ?

**ಕೃತ್ತಿಕೆ** :—ಇಲ್ಲ.

**ರೋಹಿಣಿ** : -ಅದೇಕೆ ? ಇದೇನು ಅಂದವಾಗಿಲ್ಲವೇ ?

**ಕೃತ್ತಿಕೆ** :—ಅಂದವಾಗಿಲ್ಲವೆಂದಲ್ಲ. ಅವರು ಸಕಲ ವಿಷಯದಲ್ಲಿಯೂ ಔದಾಸೀನ್ಯವನ್ನು ತಳೆದಿರುವರು.

**ರೋಹಿಣಿ** :— ಆಹುದಹುದು ಈಗ್ಗೆ ನೆನಪಾಯಿತು. ಪ್ರಾಯಸ್ಥರು ಯಾವಾಗಲೂ ತಮ್ಮ ವಿವಾಹ ವಿಷಯದ ಚಿಂತನೆಯಲ್ಲಿಯೇ ಮಗ್ನರಾಗಿರುತ್ತಾರೆ.

**ಕೃತ್ತಿಕೆ** :—ಅವರ ಮನಸ್ಸಿನ ಕೋರಿಕೆಯು ಹೇಗೆ ಪೂರ್ಣವಾಗಬೇಕು ? ಯಾವನಾದರೋರ್ವ ಸಾಧಾರಣ ರಾಜನನ್ನು ವರಿಸುವ ನಿಶ್ಚಯವನ್ನು ಮಾಡಿದ್ದರೆ, ಇಷ್ಟುಹೊತ್ತಿನಲ್ಲಿ ಅವರ ವಿವಾಹವಾಗಿ ನಾಲ್ಕು ಮಕ್ಕಳ ತಾಯಿಯೆಂದೆನಿಸಿಕೊಳ್ಳುತ್ತಿದ್ದರು. ಆದರೆ " ಚಿಕ್ಕ ಮಕ್ಕಳು ಆಕಾಶದೊಳಗಿನ ಚಂದ್ರನನ್ನು ಬಯಸುವಂತೆ ಇವರು ಜಗದ್ವಿಖ್ಯಾತನಾದ ಶ್ರೀಕೃಷ್ಣ ಮಹಾರಾಜನೇ ತಮ್ಮ ಪತಿಯಾಗಬೇಕೆಂದು ಅಪೇಕ್ಷಿಸುತ್ತಲಿದ್ದಾರೆ. " ಇದು ಸಾಧ್ಯವೇನೇ ?

**ರೋಹಿಣಿ** :—ಹೇಗೆ " ಚಂದ್ರನಲ್ಲಿಯೂ ಚಿಕ್ಕ ಮಕ್ಕಳಲ್ಲಿಯೂ ಅಂತರವಿರುವದೊ ? " ಅದೇ ಅಂತರವು, ದ್ವಾರಕೆಯ ಶ್ರೀ ಕೃಷ್ಣ ಮಹಾರಾಜರಲ್ಲಿಯೂ, ಮತ್ತೂ ನಮ್ಮ ಜಾಂಬುವಂತ ಮಹಾರಾಜರಲ್ಲಿಯೂ ಇರುವದು. ಅವರು ಆರ್ಯರು, ಇವರು ಅನಾರ್ಯರು, " ಅವರು " ಮುಂದೆ ಹೋದ ನಾಗರೀಕರ ರಾಜರು, " ಇವರು " ಹಿಂದುಳಿದ ಕಾಡುಜನರ



**ಜಾಂಬವತಿ:-** ॥ ನಿಂತಿಹಾ ಪಸನಸಃಲ ॥

ರಾಜರು, "ಅವರು" ಸುಶಿಕ್ಷಿತ ವರ್ಗದವರು "ಇವರು" ಅಶಿಕ್ಷಿತ ವರ್ಗದವರು. ಅವರಿವರ ನಡಾವಳಿಗಳಲ್ಲಿ ಮಹದಂತರವು. ಹೀಗಿರಲು ಅವರಿವರಲ್ಲಿ ಬೀಗತನವು ಕಲೆಯುವದು ಸಾಧ್ಯವಾದೀತೇ

**ಕೃತ್ತಿಕೆ** :—ವಿಚಾರವೇನೋ ಹೀಗಿದೆ. ಜಾಂಬುವತೀ ದೇವಿಯವರು ನೋಡಿದರೆ ಹಾಗೆ ಹಟತೊಟ್ಟಿದ್ದಾರೆ. ಅಂತೂ, ಇಂತೂ, ಜಾಂಬುವಂತ ಮಹಾರಾಜರ ಜೀವಕ್ಕೇನು ಸುಖವಿಲ್ಲ. ಇದ್ದೊಬ್ಬ ಮಗಳ ಸೌಭಾಗ್ಯವನ್ನು ನೋಡಿ ಆನಂದಪಡಬೇಕೆಂಬ ಅವರ ಕೋರಿಕೆಯು ನೆರವೇರುವಂತೆ ಕಾಣೆ.

**ರೋಹಿಣಿ** :—ಏನೇ! ದ್ವಾರಕೆಯ ಕೃಷ್ಣರಾಜರು ಈ ಅಡವಿಯ ಹುಡುಗಿಯನ್ನು ವರಿಸುವದಕ್ಕೆ ಒಪ್ಪುವದಿಲ್ಲವೆನ್ನುವದಂತೂ ಖಂಡಿತವಾದ ಮಾತು. ಆಮೇಲೆ ನಮ್ಮ ಜಾಂಬುವತೀ ದೇವಿಯವರ ಪರಿಣಾಮವೇನು?

**ಕೃತ್ತಿಕೆ** :—ಪರಿಣಾಮವೇನು? ಮರಣಪರ್ಯಂತರ ಹೀಗೆಯೇ ಅವಿವಾಹಿತಾವಸ್ಥೆಯಲ್ಲಿದ್ದು ಗುಡಿ ಗುಂಡಾರಗಳಲ್ಲಿ ಸೇರುವದು.

**ರೋಹಿಣಿ** :—ಅಯ್ಯೋ, ಹಾಗಾಗಬಹುದೇ? ಶಿವನೆ! ನಮ್ಮ ರಾಜಪುತ್ರಿಯವರಿಗೆ ಅಂತಹ ಸಮಯವನ್ನು ಮಾತ್ರ ತರಬೇಡ. ಕೃತ್ತಿಕೇ! ನಡೆ. ಜರಗಿದ ಸಮಾಚಾರವನ್ನು ಜಾಂಬುವಂತ ಮೋರೆಗಳಿಗೆ ತಿಳಿಸಿಬಿಡುವಾ.

ಪ್ರವೇಶ— "ಜಂಗಲು" "ಜಾಂಬುವತಿ"

**ಜಾಂಬುವತಿ** :— (ಏಕಲಾ ನಯನಾಲಾ ಎಂಬಂತೆ)

॥ **ಪದ** ॥ ನಿಂತಿಹವನವಮಾಲಿ | ಮನದ ಗೇಹದಲಿ ॥ ಪಲ್ಲ ॥
ನಸುನಗುತಲಿತಃ | ನುಸುಲುವನೆನಗೆ |
ವ್ಯಸನವ ಮಾಡವಿರೆಂದೂ ॥ ೧ ॥

ಕೃಷ್ಣರಾಜರು ನನ್ನನ್ನೇತಕ್ಕೆ ವರಿಸಲಾಗದು? ಅವರು ಕ್ಷತ್ರಿಯ ವರ್ಗದವರೆಂತಲೂ, ನಾವು ಕಾಡುಜಾತಿಯವರೆಂತಲೂ, ಇರುವ ಭೇದದಿಂದಲ್ಲವೇ?

**ರೋಹಿಣಿ** :— (ಬಂದು) ಅಮ್ಮ ಜಾಂಬುವಂತ ಮಹಾರಾಜರು ಬರುತ್ತಿದ್ದಾರೆ.

**ಜಾಂಬುವಂತ** :—ಮಗೂ! ಏನು ಮಾಡುತ್ತಿರುವೆ?

**ಪುತ್ರಿ** :—ತಾತಾ! ಮಾಡುವದೇನು? ಸುಮ್ಮನೆ ಕುಳಿತಿರುವೆನು.

**ರಾಜ** :—ನಿನ್ನ ಸಲುವಾಗಿ ಮಾಡಿಸಿದ ಈ ದಿವ್ಯಾಭರಣಗಳನ್ನೇತಕ್ಕೆ ಧರಿಸಲಿಲ್ಲ?

**ಪುತ್ರಿ** :—ಅವುಗಳನ್ನು ಧರಿಸುವ ಅಪೇಕ್ಷೆಯುಂಟಾಗಲಿಲ್ಲವೆಂದು ಧರಿಸಲಿಲ್ಲ.

**ರಾಜ** :—ಇಂತಹ ದಿವ್ಯಾಭರಣಗಳ ವಿಷಯದಲ್ಲಿ ನಿನಗೆ ಅಪೇಕ್ಷೆಯುಂಟಾಗಲಿಲ್ಲವೇ?

**ಪುತ್ರಿ** :—ಇಲ್ಲ. ತಾತಾ! ಈಗ್ಗೆ ಪ್ರೀತಿಸಿ ಅಲಂಕಾರಗಳನ್ನು ಸದಾ ತೆಗೆದುಹಾಕುವಷ್ಟು ಬೇಸರ ಹುಟ್ಟಿದೆ.

**ರಾಜ** :—ಅಮ್ಮಾ! ಈ ನಿನ್ನ ಚಂಚಲ ಸ್ವಭಾವಕ್ಕೆ ನಾನು ಬಹಳ ವ್ಯಸನಾಕ್ರಾಂತನಾಗಿದ್ದೇನೆ.

**ಪುತ್ರಿ** :— (ಕೋನಾತಫಂಯಾ ಎಂಬಂತೆ)

| **ಪದ** || ಚಂದಿಸುವದೇಕೆ! | ತಾತಾ | ಸಂತೋಷವ ನೀಡಿರುವೆ!
ಸತತಾ || ತೊಡದಿರಲು ಈ | ಪದಕೇಗಳನ್ನು |
ಮಾಡುವುದೇ? ನೀನೀತೆರ ವ್ಯಸನವನು || ೧

ತಾತಾ! ನಿಮ್ಮನ್ನು ವ್ಯಸನಕ್ಕೀಡು ಮಾಡುವದಕ್ಕಾಗಿ ನಾನು ಹೀಗೆ ಮಾಡುವದಿಲ್ಲವಲ್ಲಾ. ಕೇವಲ ಅವುಗಳ ವಿಷಯವಾಗಿ ಬೇಸರವುಂಟಾದ್ದಕ್ಕೆ ಹಾಗೆ ಮಾಡುತ್ತಲಿರುವೆನು.

**ರೋಹಿಣಿ** :—ಬುದ್ಧಿ! ತಾಯಿಯವರು ಕೇವಲ ನಿಜವಾದದ್ದನ್ನೇ ಹೇಳುತ್ತಿರುವರು. ಪ್ರಾಯಸ್ಥರಾದವರಿಗೆ ಈಗ್ಗೆ ಪತಿಯೇ ಮುಖ್ಯ ಅಲಂಕಾರವು. ಅವಿವಾಹಿತ ಸ್ಥಿತಿಯಲ್ಲಿರುವ ತರುಣಿಯರು ಹೀಗೆ

ಉದಾಸೀನವೃತ್ತಿಯಲ್ಲಿರುವದು ಸ್ವಾಭಾವಿಕ.

**ರಾಜ:**—ನೀನು ಕೇವಲ ಸಾಧುವಾದದ್ದನ್ನೇ ಹೇಳಿದೆ. ಆದರೆ ರೋಹಿಣೀ— ಇಷ್ಟು ದಿನಗಳ ತನಕ ಇವಳು ಅವಿವಾಹಿತಳಾಗಿದ್ದದ್ದು ನನ್ನಪರಾಧವೇ? ಇವಳು ಒಪ್ಪಿದ್ದರೆ ನನ್ನ ಸಮಾನಸ್ಕಂದ ರಾಜರಲ್ಲಿ ಯಾರ ಮಗನಿಗಾದರೂ ಇವಳನ್ನು ಸಂಭ್ರಮದಿಂದ ಧಾರೆಯೆರೆದು ಕೊಡುತ್ತಿದ್ದೆನು.

**ರೋಹಿಣಿ:**—ಅದೂ ನಿಜ? ಮಹಾರಾಜ ಇಂದಿಗೆ ಮೊಮ್ಮಕ್ಕಳ ಕೂಡ ವಿನೋದಾಟಗಳಲ್ಲಿ ಕಾಲ ಕಳೆಯುತ್ತಿದ್ದಿರಿ. ಆದರೆ ಮಾಡುವದೇನು? ಉಪಾಯಗಾಣದಾಗಿದೆ.

**ರಾಜ:**—ಮಗಳೇ ಕೊನೆಗೆ ಇಷ್ಟಾದರೂ ಹೇಳು. ಕಿಷ್ಕಿಂದೆ ರಾಜಪುತ್ರರನ್ನಾದರೂ ಒರಿಸುವೆಯಾ? ಭಗೀರಥ ಪ್ರಯತ್ನವನ್ನು ಮಾಡಿ ಅವರ ಒಪ್ಪಿಗೆಯನ್ನು ಕೊಳ್ಳುವೆನು.

**ರೋಹಿಣಿ:**—ಬಹು ದಿವ್ಯ; ಕಿಷ್ಕಿಂದೆಯ ರಾಜರು ನಮ್ಮೆಲ್ಲರ ಸಾರ್ವಭೌಮರು ಅವರ ಪಟ್ಟರಾಣಿಯವರಾದರೆ ನಮ್ಮ ಜಾಂಬುವತೀ ದೇವಿಯವರ ಸೌಭಾಗ್ಯವನ್ನೆಷ್ಟು ಕೊಂಡಾಡಿದರೂ ತೀರದು? ಏಕೆ ಅನ್ನುನವರೇ! ಒಪ್ಪಿಗೆಯಲ್ಲವೇ?

**ಪುತ್ರಿ:**— ರಾಗ ‖ ಸಂಶಯ ‖ ಕಾ ಮುನಿ ಆಲಾ

‖ **ಪದ** ‖ ಯಾರನು ವರಿಸೆನು ನಾನು । ಪಿತನೇ । ಕೋರುವೆನೂ ' ಕ್ಷಮೆ ।
ಯನ್ನೂ ‖ ಪೇಳುವದೇಕೆ ? ಬೇರೆ ಪುರುಷರ । ಕೇಳೆನು ।
ವಾರ್ತೆಯ ನಾನೂ ‖ ೧ ‖

ಇಲ್ಲ. ಶ್ರೀಕೃಷ್ಣರಾಜರ ವಿನಃ ನಾನಾರನ್ನೂ ವರಿಸುವದಿಲ್ಲ. ಅವರ ಸಲುವಾಗಿಯೇ ಎರಡು ತಪಗಳನ್ನು ಕಳೆದಿರುವೆನು. ಹೀಗೆಯೇ ಕೊನೆಯವರೆಗೂ ಕಾಲಹರಣ ಮಾಡುವೆನು. ಆದರೆ ಕೃಷ್ಣಾರ್ಪಿತವಾದ ಈ ದೇಹವನ್ನು ಪರಸ್ವಾಧೀನ ಮಾಡೆನು.

**ರಾಜ:**—ಮಗಳೇ! ನೀನು ಹೇಳುವದು ಅಸಾಧ್ಯವಾದ ಸಂಗತಿಯಲ್ಲವೇ?

**ಪುತ್ರಿ:**—ಸಾಧ್ಯವನ್ನು ಮಾಡಿಕೊಳ್ಳುವ ಪ್ರಯತ್ನವನ್ನು ಮಾಡುವದ

ವದಕ್ಕಿಂತ ಮುಂಚಿತವಾಗಿಯೇ! ಅಸಾಧ್ಯವಾದ ಸಂಗತಿಯೆಂದು ಹೇಳ ಬಹುದೇ?

**ರಾಜ :**—ಸಾಧ್ಯವನ್ನು ಮಾಡಿಕೊಳ್ಳುವದಕ್ಕಾಗಿ ನಾನಾವ ಉಪಾಯ ವನ್ನು ಮಾಡಲಿ?

**ಪುತ್ರಿ :**—ಲೋಕವೆಲ್ಲವೂ ಹೇಗೆ ಮಾಡುವದೋ ಹಾಗೆ ಮಾಡಬೇಕು.

**ರಾಜ :**— ರಾಗ—ಆನಂದಭೈರವಿ । ತಾಳ—ಧುಮಾಳಿ

॥ **ಪದ** ॥ ಮನ್ನಿಸಿದರೆ ನಿನ್ನಯ ಸೂಚನೆಯನು । ಮಾನಹಾನಿಯಾಗುವದೇ ।
ಖಂಡಿತ। ಮುಳೀ ಮಾಡದಿರೇ ಮನದೇ । ಆಗದಪೇಕ್ಷೆಯನೂ ॥
ಮಾತೆಯನಗಲಿದ ಮಗುವಾದುದಕೆ। ಪ್ರೀತಿಯಿಂದ ಬೆಳೆ।
ಸಿದೆನೇ ಸಲುಹಿ । ಈ ತೆರಚಿಂತೆಯೊಳೂ ಸಂತತ ।
ಭೋ ತನು ಜಾತೆಯೆ ನೋಡೆನು ನಿನ್ನನು ॥ ೧ ॥

**ಪುತ್ರಿ :**—ತಾತಾ ಹೀಗೇನು ಹೇಳುವಿ? ಮಾನಹಾನಿಯಾಗುವ ಕಾರಣ ವೇನು.

**ರೋಹಿಣಿ :**—ದೇವಿಯವರೇ! ಮಾನಹಾನಿಯಾಗದೇ ಬಿಟ್ಟೀತೇ? ಕೇವಲ ಸುಧಾರಣೆಯ ಶಿಖರವನ್ನೇರಿದ ಯಾದವರ ದರ್ಬಾರದಲ್ಲಿ ನಮ್ಮ ಅಡ ವೆಯ ಜಾಂಬುವಂತ ರಾಜರು ಪ್ರವೇಶ ಮಾಡುತ್ತಲೇ ಮೊದಲಿಗೇನೇ ಹಾಸ್ಯ ಮಾಡದಿರಲಾರರು. ಅದನ್ನೂ ಸಹನ ಮಾಡಿಕೊಂಡು ಶ್ರೀಕೃಷ್ಣ ಮಹಾರಾಜರಿಗೆ ತಮ್ಮನ್ನು ಕೊಡುವ ಸುದ್ದಿಯನ್ನು ತಿಳಿಸಿದಮೇಲಂತೂ ಉಪಹಾಸ್ಯ ಮಾಡಿ ಅಪಮಾನಮಾಡುವದೇ ಖಂಡಿತ.

**ರಾಜ :**— ಮಗಳೇ! ಆರ್ಯಜನಾಂಗವು ನಮ್ಮನ್ನು ಕೀಳರೆಂದೆಣಿಸು ವಾಗ ನಮ್ಮೊಡನೆ ಶರೀರ ಸಂಬಂಧವನ್ನು ಬೆಳೆಸುವರೆಂದು ನಂಬುವದು ಮೂರ್ಖತನವಲ್ಲವೇ?

**ಪುತ್ರಿ :**—ಹಾಗಾದರೆ ಇಂದ್ರಪ್ರಸ್ಥ ಯುವರಾಜನಾದ ಭೀಮಸೇನನು ಅನಾರ್ಯ ಹಿಡಿಂಬೆಯನ್ನು ಹೇಗೆ ವರಿಸಿದನು? ಅವರ ಪೂರ್ವಜರಲ್ಲೊ ಬ್ಬನಾದ ಯಯಾತಿರಾಯನು ಶರ್ಮಿಷ್ಠೆಯೆಂಬ ರಾಕ್ಷಸ ಕನ್ಯೆಯನ್ನೊ ರಿಸಿದ್ದನಂತೆ! ಅಲ್ಲದೇ ಸ್ವತಃ ಶ್ರೀಕೃಷ್ಣರಾಜರೇ ಕುಬ್ಜೆಯಂಥ ಹೀನ



**ಜಾಂಬುವಂತ –** ‖ ಮಾತೆಯನಗಲಿದ ಮಗುವಾದುದಕೇ । ಪ್ರೀತಿಯಿಂದ ಬೆಳಿಸಿದೆನೇ ಸಲಹಿ ‖

ದಾಸಿಯಳನ್ನು ಉದ್ಧರಿಸಿರುವಾಗ್ಗೆ ನಿಮ್ಮ ಅನುಜಾತೆಯಾದ ನನ್ನನ್ನು ಪೇಕ್ಷಿಸುವರೇ ?

ರಾಜ :—ತಾಯೀ ನೀನಿನ್ನೂ ಯಾವ ಸಂಗತಿಗಳನ್ನೂ ಕೇಳಿಲ್ಲವಾಗಿ ಕಾಣುತ್ತೆ.

ಪುತ್ರಿ : - ಅದಾವ ಸಂಗತಿಗಳು ?

ರಾಜ :—ಆರ್ಯರು ನಮ್ಮನ್ನು ಮನುಷ್ಯ ಕೋಟಿಯಲ್ಲಿ ಕೂಡ ಗಣಿಸಿಲ್ಲ. ನಮ್ಮನ್ನು ಕರಡಿಗಳೆಂದು ಭಾವಿಸಿದ್ದಾರೆ. ವಿಶೇಷವೇನು ? ಕಿಷ್ಕಿಂದೆಯ ರಾಜ್ಯದವರನ್ನೂ ಕೂಡ ಕಪಿಗಳೆಂದು ಭಾವಿಸಿದ್ದಾರೆ.

ಪುತ್ರಿ :—ಈ ತಮ್ಮ ಮಾತುಗಳಿಗೆ ನಾನೊಪ್ಪೆನು. ಅಂಥ ಪರಂಪರೆಯಂತೆ ಈವರೆಗೂ ಅವರು ನಮ್ಮನ್ನು ಪಶುಕೋಟಿಯಲ್ಲಿ ಗಣಿಸುತ್ತಲಿದ್ದರೆ ಆ ಅಪಮಾನವನ್ನು ಸಹಿಸುವದು ಯೋಗ್ಯವೇ ? ನಾವೂ ಮಾನವರೆಂದೂ ನಿಮ್ಮ ಸಮ ಸಮಾನ ರಾಜರೆಂದೂ ಸಿದ್ಧಮಾಡಿಕೊಡುವ ಯೋಗ್ಯತೆಗಳು ನಿಮ್ಮಲ್ಲಿಲ್ಲವೇ ?

ರಾಜ :—ಮಗೂ ! ನೀನು ವಿಚಾರತರಂಗಗಳಲ್ಲಿ ಬಹೂ ದೂರ ಹೋದೆ. ಅಲ್ಲದೇ ಕೇವಲ ವಿಷಯಾಂತರವನ್ನೂ ಸಹ ಮಾಡಿದೆ. ಮಾನವರೆಂದು ಸಿದ್ಧಮಾಡುವದಕ್ಕಾಗಿ ನಾವು ಅವರೊಡನೆ ಹೋರಾಡಬೇಕಾಯಿತು.

ಪುತ್ರಿ :—ಹಾಗೇತಕ್ಕೆ ಮಾಡಬಾರದು ? ನಮ್ಮನ್ನು ಪಶುಕೋಟಿಯಲ್ಲಿ ಗಣಿಸುವ ಮೂರ್ಖರಿಗೆ ಅಂಜನವನ್ನು ಹಾಕಬಾರದೇಕೆ ?

ರಾಜ :—ಅದನ್ನು ಕಾಲ ಬಂದಾಗ್ಗೆ ನೋಡುವಾ.

ಪುತ್ರಿ :—ಆ ಕಾಲವು ಈಗಲೇ ಬಂದಿರುವದೆಂದು ಭಾವಿಸಿ ಕಾರ್ಯದಲ್ಲಿ ತೊಡಗುವದರಿಂದ ಬಾಧಕವೇನು ?

ರಾಜ :—ಮಗೂ ! ನಾನೇನು ಪ್ರಯತ್ನಪಟ್ಟರೂ ಕೃಷ್ಣರಾಜರು ನಿನ್ನನ್ನು ವರಿಸುವದಕ್ಕೊಪ್ಪದಿದ್ದರೆ ವ್ರಥಾ ಶ್ರಮವಾದಂತಾಗುವದಿಲ್ಲವೇ ?

ಪುತ್ರಿ :—ಹಾಗಾಗುವದೆಂಬ ನಿಮ್ಮ ತರ್ಕವು ಖಂಡಿತವಾಗಿದ್ದರೆ ? ತಾವು

ನನ್ನ ಲಗ್ನದ ಹವ್ಯಾಸನವನ್ನೇ ಬಿಟ್ಟುಕೊಡಿ. ಹೀಗೆಯೇ ಆಮರಣ ಪರ್ಯಂತರ ಕುಮಾರಿಕಾವಸ್ಥೆಯಲ್ಲಿಯೇ ಕಾಲ ಕಳೆಯುವೆನು.

**ರಾಜ**:—ಮಗೂ! ನೀನು ಆಗದ ಹವ್ಯಾಸವನ್ನು ಹಿಡಿದು ಮುಪ್ಪಿನ ಕಾಲದಲ್ಲಿ ನನಗೆ ಅನಿವಾರ ಚಿಂತೆಯನ್ನುಂಟುಮಾಡಿದೆ.

**ಪುತ್ರಿ**:—ತಾತಾ! ನಾನೇನು ಮಾಡಲಿ? ತಮ್ಮ ಮನಸ್ಸಿನ ಸಮಾಧಾನಕ್ಕಾಗಿ ತಾವು ಹೇಳುವ ಯಾವನಾದರೋರ್ವ ರಾಜಪುತ್ರನನ್ನು ವರಿಸುವ ಆಲೋಚನೆಯನ್ನು ಮಾಡುವಾಗ್ಗೆ ಮನವು ಭಯಗೊಂಡಂತಾಗುವದು. ದೇಹವು ನಡಗುವದು. ಕಣ್ಣುಗಳಲ್ಲಿ ಕತ್ತಲೆ ಕವಿಯುವದು ಸಕಲ ದಿಕ್ಕುಗಳೂ ಶೂನ್ಯವಾಗುವವು.

**ರೋಹಿಣಿ**:—ಅಮ್ಮನವರೇ! ಹಾಗಾಗುವ ಕಾರಣವೇನು? ಇಷ್ಟೊಂದು ಭಕ್ತಿಯು ಕೃಷ್ಣರಾಜರಲ್ಲಿ ಹೇಗೆ ನೆಲಸಿತು? ಅವರ ಗುಣರೂಪಾದಿಗಳ ವಿಷಯದಲ್ಲಿ ತಾವು ಕೇವಲ ಅಪರಿಚಿತರು. ಹೀಗಿರಲು ತಾವವರಲ್ಲಿಷ್ಟು ಮೋಹಗೊಂಡದ್ದು ಸೋಜಿಗವಲ್ಲವೇ?

**ರಾಜ**:—ರೋಹಿಣಿ! ಹಾಗೆ ಹೇಳಬೇಡ. ಅವರ ಗುಣವು ಚಿರಪರಿಚಿತವಾದಂತಾಗಿದೆ. ರೂಪವು ಕಣ್ಣುಗಳಲ್ಲಿ ಕಟ್ಟಿದೆ. ಅವರ ಅಮೃತಧಾರೆಯನ್ನು ಸುರಿಸುವ ಮಾತುಗಳ ಇಂಪು ಕಿವಿಗಳಲ್ಲಿ ಕೇಳಿಸುತ್ತಲಿದೆ. ವಿಶೇಷವೇನು? ನೂರಾರು ಜನಗಳಲ್ಲಿ ಕೃಷ್ಣರಾಜರಿದ್ದರೂ, ಇಂಥವರೇ ಎಂದು ತಪ್ಪದೇ ಹೇಳಬಲ್ಲೆನು. ಇಷ್ಟು ಅವರ ರೂಪವು ನನ್ನ ಮನಸ್ಸಿನಲ್ಲಿ ನಟ್ಟುಬಿಟ್ಟಿದೆ.

**ರಾಜ**:—ಎಂದೂ ನೋಡದೇ ಇದ್ದ ವ್ಯಕ್ತಿಯ ಸಲುವಾಗಿ ಹೀಗೆ ನೀನು ಹೇಳುವ ಸಂಗತಿಯು ಅತ್ಯಾಶ್ಚರ್ಯಕರವಾದದ್ದು.

**ಪುತ್ರಿ**:—ತಾವೇ ಪರ್ಯಾಲೋಚಿಸಿ ಸ್ವಯಂವರ ಪದ್ಧತಿಯಂತೆ ಅವಿವಾಹಿತರಾದ ವಧೂವರರ ಪ್ರೇಮವು ಪ್ರಥಮ ದರ್ಶನದಿಂದ ಪರಸ್ಪರರಲ್ಲಿ ಬೆಳೆಯುತ್ತ ಹೋಗುವದು. ಆದರೆ ನನ್ನ ಪ್ರೇಮವು ಅದನ್ನು ಹೋಲದು. ನಾನು ಶ್ರೀಕೃಷ್ಣರಾಜರ ವ್ಯಾಮೋಹವನ್ನು ಹಿಡಿದಂತೆ ಅವರು ನನ್ನ ವ್ಯಾಮೋಹವನ್ನು ಹಿಡಿದಿಲ್ಲ. ಯಾಕೆಂದರೆ ಎಂದೂ

ಅವರು ನನ್ನನ್ನು ನೋಡಿಲ್ಲ. ಒಂದು ಪಕ್ಷಕ್ಕೆ ನೋಡಿದರೂ ಅಡವಿಯ ಹುಡುಗಿಯಾದ ನನ್ನನ್ನವರು ಮೋಹಭಾವದಿಂದಂತೂ ಎಷ್ಟು ಮಾತ್ರಕ್ಕೂ ನೋಡರು. ಹೀಗಿರಲು ಏನೋ ನನ್ನ ಸುಕೃತ ಬಲ ವಿಶೇಷದಿಂದ ಅವರೊಡನೆ ನನ್ನ ವಿವಾಹವಾದರೂ ನನ್ನನ್ನವರಷ್ಟೊಂದು ಪ್ರೀತಿಸಲಿಕ್ಕಿಲ್ಲ. ಯಾಕೆಂದರೆ ಕೇವಲ ರೂಪಸಂಪನ್ನೆಯರಾದ ರಾಣಿಯರು ಅವರಿಗೆ ಅನೇಕರಿದ್ದಾರೆ.

**ರೋಹಿಣಿ**:—ನೋಡಿ, ನೋಡಿ, ನೋಡಿ, ಇಷ್ಟೆಲ್ಲ ಭವಿಷ್ಯವು ಗೊತ್ತಿದ್ದರೂ ಅವರನ್ನೇ ವರಿಸುವ ವಿಚಾರವನ್ನು ಮಾಡುವಿರಿ. ಇದಕ್ಕೇನನ್ನಬೇಕು ?

**ಪುತ್ರಿ** :—ಇದಕ್ಕೆ ನನ್ನ ಅಜ್ಞಾನವೆಂದು ಬೇಕಾದರೆ ಹೇಳಿ.

**ರಾಜ** :—ಹೀಗೆ ಅಜ್ಞಾನಮೂಲಕ ಮಾಡಿದ ವಿಚಾರಗಳಿಂದ ನಿನಗೆ ಸುಖವಾಗಬಹುದೇ ?

**ಪುತ್ರಿ**:—ಸುಖದಾಸೆಗಾಗಿ ನಾನವರನ್ನು ಪತಿಯೆಂದು ಭಾವಿಸುವದಿಲ್ಲವಲ್ಲಾ ಸ್ವಾಭಾವಿಕವಾಗಿ ಹಾಗೆ ನನ್ನ ವೃತ್ತಿಯಾಗಿದೆ. ಅದರ ಕಾರಣವು ನನಗಾದರೂ ಗೊತ್ತಾಗಲೊಲ್ಲದು.

**ದೂತ** :— (ಬಂದು ನಮಿಸಿ) ಬುದ್ಧಿ! ಯಾರೋ ಇಬ್ಬರು ದ್ವಾರಕೆಯವರಂತೆ! ಬುದ್ಧಿಯವರನ್ನು ಕಾಣಲು ಬಂದಿರುವರು.

**ಮುಖ**ವರ್ಗ :—ಏನು ದ್ವಾರಕೆಯವರೇ ?

**ದೂತ** :—ಅಹುದಮ್ಮನವರೇ ?

**ರಾಜ** :—ಅವರು ಈಗ್ಗೆ ಎಲ್ಲಿರುವರು ?

**ದೂತ** :—ಸಭಾ ಮಂಟಪದಲ್ಲಿ.

**ಪುತ್ರಿ** :—ಏನು ರಾಜರಾಗಿರುವರೇ!

**ದೂತ** :—ಇಲ್ಲ ಅಮ್ಮನವರೇ ಸಾಧಾರಣರು.

**ರಾಜ** :—ಏನು ? ದ್ವಾರಕೆಯಿಂದ ಬಂದ ಮಾತ್ರಕ್ಕೆ ಶ್ರೀಕೃಷ್ಣರಾಜರೇ!

ಬಂದರೆಂದು ಭಾವಿಸುವಿಯಾ? ಮಗಳೇ! ಅಪ್ರಾಪ್ಯ ವಸ್ತುವಿನ ಪ್ರಾಪ್ತಿಗಾಗಿ ಬರಬರುತ್ತಾ ನಿನಗೆ ಹುಚ್ಚು ಹಿಡಿಯುವದೆಂದು ಕಾಣುತ್ತೆ.

**ಪುತ್ರಿ** :—ಹಾಗಾದರೂ ಸಂತೋಷವೇ.

**ರಾಜ** :– ಹಾಗೆಯೇ ಭವಿತವ್ಯವಿದ್ದರೇ ಅದನ್ನು ತಪ್ಪಿಸುವರಾರು?

ರಾಗ ಪುರಿಯಾ ತಾಲ ತ್ರಿವಟ

॥ **ಪದ** ॥ ಮೀರುವದು ಸಾಧ್ಯವೇ | ಭವಿತವ್ಯ ವಾ ಸುಕುಮಾರೀ |
ನರರು | ಸುರರು ನಜಗವಾ | ಸೃಜಿಸಿ ನಡಿಸೀ | ಲಯಿಸು |
ವಂಥ ಹರಿಹರಜರೂ | ಭವಿತವ್ಯ ದಾಸರಾಗಿರೆ |
ವಿರುವಾಗಲನ್ಯರದೇನುಪಾಡು |

ಆಗಲಿ ನಡೆ ದೂತನೇ ಅಭ್ಯಾಗತರನ್ನು ಕಂಡು ಬರುವಾ (ದೂತನೊಡನೆ ಜಾಂಬುವಂತನು ಹೋಗುವನು)

**ಪುತ್ರಿ** :—ಸಖೀ ರೋಹಿಣಿ! ನಮ್ಮ ಸಂಭಾಷಣೆಯಲ್ಲಿ ಜರಗಿದ ಪ್ರಸಂಗಕ್ಕೂ ದ್ವಾರಕೆಯ ಅಭ್ಯಾಗತರ ಬರುವಿಕೆಗೂ ಏನೋ ಅನ್ಯೋನ್ಯ ಸಂಬಂಧವಿರಬಹುದಾಗಿ ಕಾಣುತ್ತೆ.

**ರೋಹಿಣಿ** :—ಸಂದರ್ಭವೇನೋ ಹಾಗೆ ಕಲಿಯಿತು. ನಿಜ. ಆದರೆ ಅದರಿಂದ ತಮ್ಮ ಮನೋಭಿಷ್ಟವು ಪೂರ್ಣವಾದೀತೆಂದು ನಂಬಲಿಕ್ಕೆ ಮಾರ್ಗವಿಲ್ಲ.

**ಪುತ್ರಿ** :—ನೀನೇನೇ ಹೇಳು. ಈ ಸಂದರ್ಭದಿಂದ ನನ್ನ ವಿಶ್ವಾಸವು ಶತಗುಣಿತವಾಗಿದೆ.

**ರೋಹಿಣಿ** :—ಏನು? ಶ್ರೀಕೃಷ್ಣರಾಜರು ತಮ್ಮನ್ನು ಪಾಣಿಗ್ರಹಿಸುವರೆಂಬ ವಿಶ್ವಾಸವೇ?

**ಪುತ್ರಿ** :—ಅಹುದು, ಅದೇ ವಿಶ್ವಾಸವು.

**ರೋಹಿಣಿ** :—ಆಗಲಿ ದೇವಿ. ತಮ್ಮ ವಿಶ್ವಾಸವೇ ನಿಜವಾಗಲಿ. ಎತ್ತಾದರೂ ತಾವು ಶ್ರೀಕೃಷ್ಣರಾಜರ ಪಾಣಿಗ್ರಹಿಸಿದ್ದನ್ನು ಈ ಕಣ್ಣುಗಳು ಕಂಡವೆಂದರೆ ತೀರಿತು ಧನ್ಯರಾದೆವು.

**ಪುತಿ**,—ಈ ಲಕ್ಷಣವು ಶುಭಲಕ್ಷಣವಾಗಲೆಂದು ನಿಮ್ಮ ಕುಲಸ್ವಾಮಿ ಯಾದ ಮಹಾಕಾಳಿಯನ್ನು ಪ್ರಾರ್ಥಿಸುವಾ ನಡೆ.

ಚಾಲ ॥ ಲವಕರೀ ಧಾವರಿ ॥

॥ **ಪದ** ॥ ಭಜಿಸುವಾ ಬಾರೆಲೆ, ಭುವನೇಕವೂತೆಂವಾ,
ಶಿವನಾಭವಾನಿಯಾ ॥ ಪಲ್ಲ ॥ ದಾಕ್ಷಾಯಿಣೀತಾನೆನ್ನ । ಸೇ
ಕ್ಷೆಯಾಪೂರ್ಣ । ಗೈವಳೀ ಸ್ನೆಜದಿಂದ ॥ (ಹೋಗುವರು)

(ಪ್ರವೇಶ ಅರಮನೆಯ ಒಂದು ಭಾಗ)

ಪಾರುಪತ್ಯಗಾರ— (ಮುದುವ)

**ಮುದುವ**:—ಸ್ವಾಮೀ ತಾವು ಯಾರು!

**ಕೃಷ್ಣ**:—ಅಯ್ಯಾ ನಾವು ದ್ವಾರಕಾನಿವಾಸಿಗಳು. ದೇಶವನ್ನು ನೋಡ ಲಿಕ್ಕೆ ಅಪೇಕ್ಷೆಯಿಂದ ಹೊರಟವರು. ನೀವು ಇದೇ ಆಸ್ಥಾನಕ್ಕೆ ಸಂ ಬಂಧಪಟ್ಟವರೋ?

**ಪಾರುಪತ್ಯಗಾರ**:—ಅಹುದು ಮಹಾಸ್ವಾಮಿ ನಾನು ಇದೇ ಜಾಂಬುವಂತ ಮಹಾರಾಜರ ಅರಮನೆಯ ಪಾರುಪತ್ಯಗಾರನು.

**ಕೃಷ್ಣ**:—ವಿಜಯಾ! ಮೊದಲಿಗೇನೇ ಪಾರುಪತ್ಯಗಾರರ ದರ್ಶನವಾಯ್ತು?

**ವಿಜಯ**:—ಶುಭ ಲಕ್ಷಣವಿದೆ.

**ಕೃಷ್ಣ**:—ಅಯ್ಯಾ! ಪಾರುಪತ್ಯಗಾರರೇ! ಧನಕನಕ ಸಂಪನ್ನರಾಷ್ಟ್ರದ ಸ್ವಾಮಿಯಾದ, ಜಾಂಬುವಂತ ರಾಜನನುಯಾಯಿಗಳಾದ ನೀವು, ಬಹೂ ಭಾಗ್ಯವಂತರು.

**ವಿಜಯ**:—ಸಂದೇಹವೇನು? ಈ ರಾಷ್ಟ್ರದಲ್ಲಿ ಬಂಗಾರವು ಕಬ್ಬಿಣಕ್ಕಿಂ ತಲೂ ಕಡೆಯಾಗಿದೆ.

**ಮುದುವ**:—ರಾಷ್ಟ್ರದಲ್ಲೇನಿದೆ? ಮಹಾಸ್ವಾಮಿ! ಬರೇ ಗುಡ್ಡಗಾಡು.

**ಕೃಷ್ಣ**:—ಹಾಗಾದರೆ ಈ ಸುವರ್ಣ ರಾಶಿಯು ಎತ್ತಿಂದ ಬಂತಯ್ಯಾ?

**ವಿಜಯ**:—ಯಾರನ್ನು ನೋಡಿದರೂ ಚಿನ್ನಾಭರಣಗಳಲ್ಲಿ ಮೆರೆಯುತ್ತಿ ದ್ದಾರೆ.

**ಕೃಷ್ಣ** :—ಬರುವಾಗ್ಗೆ ನಗರ ರಕ್ಷಕರನ್ನು ನೋಡಲಿಲ್ಲವೇ? ಬರೇ ಚಿನ್ನ ವನ್ನೇ ಹೊತ್ತಿದ್ದರು.

**ವಿಜಯ** :—ಒಳ್ಳೇ ನಗರ ರಕ್ಷಕರ ಸಮಾಚಾರವನ್ನು ಹೇಳುವೆ? ಬೀದಿ ಯನ್ನು ಉಡುಗುವವರೂ ಕೂಡಾ ಚಿನ್ನಾಭರಣಗಳಲ್ಲಿ ಮೆರೆಯುತ್ತಲಿ ದ್ದಾರೆ.

**ಮುದುವ** :—ಅದೆಲ್ಲವೂ ನಮ್ಮ ಮಹಾರಾಜರ ಪುಣ್ಯವು.

**ಕೃಷ್ಣ** :—ನಿಶ್ಚಯವಾಗಿ ಪುಣ್ಯವಿಲ್ಲದೇ ಹೀಗೆ ಲಕ್ಷ್ಮಿಯು ನಿಲ್ಲುವಳೇ? ಅಯ್ಯಾ! ಪಾರುಪತ್ಯಗಾರರೇ! ನಿಮ್ಮ ದೇಶದಲ್ಲಿ ಚಿನ್ನದ ಕಣಿಗಳು ಬಹುವಾಗಿರುವವಲ್ಲವೇ?

**ಮುದುವ** .—ಮತ್ತು ಅದೇ ಸಮಾಚಾರ! ಮಹಾಸ್ವಾಮೀ! ನಮ್ಮ ದೇಶದಲ್ಲಿ ಕಾಡು ಬೆಟ್ಟಗಳ ವಿನಃ ಬೇರೆ ಏನೂ ಇಲ್ಲವೆಂದು ಮೊದಲೇ ಅರಿಕೆ ಮಾಡಿಕೊಂಡಿಲ್ಲವೇ?

**ಕೃಷ್ಣ** :—ಕಣಿಗಳಿಲ್ಲದೇ ಸಮೃದ್ಧವಾಗಿ ಚಿನ್ನವಿರಬೇಕಾದರೆ ಮಳೆಗಾಲ ವಲ್ಲೊಂದು ಸಲ ಚಿನ್ನದ ಮಳೆಗರೆಯುತ್ತಿರಬಹುದು.

**ವಿಜಯ** : – ಹಾಗೂ ಇರಬಹುದು.

**ಮುದುವ** :– –ಆ ಸಂದರ್ಭವು ತಮಗೆ ಗೊತ್ತಾಗದು. ಅದು ಬಹೂ ಸೋಜಿಗವಾಗಿದೆ.

**ಇಬ್ಬರೂ** .—ಅಂತಹ ಸೋಜಿಗದ ಸಂಗತಿಯೇನು?

**ಮುದುವ** :—ನೋಡಿ! ನಮ್ಮ ಜಾಂಬುವಂತ ಮಹಾರಾಜರು ಘನವಾದ ಶಿವಭಕ್ತರು.

**ಕೃಷ್ಣ** :—ಏನು? ಶಿವಭಕ್ತರೇ? ನಾನಿವರು ರಾಮಭಕ್ತರೆಂದು ಕೇಳಿ ದ್ದೆನು.

**ಮುದುವ** :—ಅದಾದರೂ ಸರಿಯೇ ಇವರ ಮೂಲಪುರುಷರಾದ ಜಾಂಬು ವಂತ ದೇವರು ತ್ರೇತಾಯುಗದಲ್ಲಿ ರಾಮದೇವರ ಸೇವೆಯನ್ನು ಕೈಕೊಂ

ಔದ್ದರಂತೆ. ಆದರೂ ರಾಮದೇವರು ಇಷ್ಟದೇವರು. ಇವರ ಕುಲ ದೇವರು ಶ್ರೀಮಹಾದೇವರೂ. ... ... .... ...

**ವಿಜಯ** :—ಊ ... ... ಮುಂದೆ? ಮುಂದೆ?

**ಮುದುವ** :—ಆ ಶಿವನ ಸೇವೆಯನ್ನು ಹಗಲಿರಳೂ ಮಾಡುವ ನಮ್ಮ ಜಾಂಬುವಂತ ಮಹಾರಾಜರಿಗೆ ಈಗ್ಗೆ ಎರಡು ತಿಂಗಳಾಚೆಯಲ್ಲಿ ಬೇಟೆಯನ್ನಾಡಲಿಕ್ಕೆ ಹೋದಾಗ್ಗೆ ಒಂದು ಮಣಿಯು ಸಿಕ್ಕಿದೆ ಮಣಿ?

(ವಿಜಯ ಕೃಷ್ಣ ಪರಸ್ಪರ ಸಂಕೇತನ ಮಾಡುವರು)

**ಮುದುವ** :—ಏನು? ಆಶ್ಚರ್ಯಯುಕ್ತರಾದರಲ್ಲಾ? ನಾನು ಹೇಳುವದನ್ನು ಸುಳ್ಳೆಂದು ತಿಳಿದುಕೊಂಡಿರೋ? ಹೇಗೆ? ಮಹಾಸ್ವಾಮೀ! ಕಾಡು ಜಾತಿಯವರಾದ ನಾವು ಸುಳ್ಳಾಡತಕ್ಕವರೇ?

**ಇಬ್ಬರೂ** :—ಅಯ್ಯೋ ಉಂಟೇ? ಆಶ್ಚರ್ಯವಾದದ್ದಕ್ಕೆ ಹಾಗೆ ಮಾಡಿದೆವು.

**ಮುದುವ** :—ಮುಂದೆ ಕೇಳಿ ಆಶ್ಚರ್ಯದ ಸಂಗತಿಯು ಇನ್ನೂ ಮುಂದೆ ಇರುವದು.

**ವಿಜಯ** :—ಹಾಗಾದರೆ ಹೇಳಿ ಹೇಳಿ. (ಮುಂದೆ ಸರಿಯುವನು)

**ಮುದುವ** :—ಇದೇನು ಸ್ವಾಮಿ! "ಮುಂದೆ" "ಅಂದರೆ ಮಾತಿನ ಮುಂದೆ" ತಾವು ಹಾಗೆ ಹೊರಟು ಬಿಟ್ಟಿರಲ್ಲಾ.

**ಕೃಷ್ಣ** :—ವಿಜಯಾ! ಮಾತಿನ ಮುಂದೆ, ಆಗಲಿ ಸ್ವಾಮಿ! ಮುಂದೆ.

**ಮುದುವ** :—"ಆ ಮಣಿಯೂ, ಯಾವ ಮಣಿಯೂ?"

**ವಿಜಯ** :—ಆ ಕಾನನದಲ್ಲಿ ಸಿಕ್ಕ ಮಣಿಯೂ? ..........

**ಮುದುವ** :—ಅಲ್ಲ ಸ್ವಾಮಿ! ಬೇಟೆಯಾಡಲಿಕ್ಕೆ ಹೋದಾಗ್ಗೆ ಸಿಕ್ಕ ಮಣಿಯೂ.........

**ಕೃಷ್ಣ** :—(ವಿಜಯನಿಗೆ) ಯಾವ ಮಣಿಯೂ? .........

**ವಿಜಯ** :—ಬೇಟೆಯಾಡಲಿಕ್ಕೆ ಹೋದಾಗ್ಗೆ ಸಿಕ್ಕ ಮಣಿಯೂ ? ........

**ಕೃಷ್ಣ** :—ಆಗಲಿ ಮುಂದೆ ?

**ಮುದುವ** :—ಆ ಮಣಿಯು ದಿನಾಲು ಈ ಅಳತೆ ಬಂಗಾರವನ್ನು ಕೊಡುವದು.

**ವಿಜಯ** :—ಏನು? ಬಂಗಾರವನ್ನೇ ?

**ಮುದುವ** : ಕಬ್ಬಿಣವೆಂದು ಹೇಳಲಿಲ್ಲವಲ್ಲಾ.

**ಕೃಷ್ಣ** :—ಎಲೋ ವಿಜಯಾ ! ಅಧಿಕ ಪ್ರಸಂಗವು ಬೇಡ ಸುಮ್ಮನೇ ಕೇಳು

**ಮುದುವ** :— ಆ ಮಣಿಯು ಈಗ್ಗೆ ಎರಡು ತಿಂಗಳುಗಳಿಂದ ನಿತ್ಯದಲ್ಲಿಯೂ ಈ ಅಳತೆ ಬಂಗಾರವನ್ನು ಕೊಡುತ್ತಲಿದ್ದರೆ ಎರಡು ತಿಂಗಳಿಗೆ ಎಷ್ಟಾಯಿತು ?

**ಕೃಷ್ಣ** : - ವಿಜಯಾ! ಲೆಕ್ಕ ಮಾಡು.

**ವಿಜಯ** :—(ವಿಚಾರ ಮಾಡಿ) ಈ ಲೆಕ್ಕವು ನನಗೆ ಬಗೆ ಹರಿಯುವಂತಿಲ್ಲ.

**ಕೃಷ್ಣ** :—ಹಾಗಾದರೆ ನೋಡಿ ಅದೋ ಅಲ್ಲಿಯೊಂದು ಹಿರೆಗುಡ್ಡ ಕಾಣುತ್ತಿರುವದಲ್ಲವೇ ? ಅದರ ಪಕ್ಕದಲ್ಲಿ ಒಂದು ಮರಿಗುಡ್ಡವಿದೆ ನೋಡಿ. ಅದರಷ್ಟಾಯಿತು. ಇರಲಿ ಮುಂದೆ ?

**ಮುದುವ** :—ಮುಂದೇನು ? ಮಿತವಾಗಿ, ಸಿಕ್ಕರೆ ಯಾರಾದರೂ ಅಚ್ಚುಕಟ್ಟಾಗಿ ಪೆಟ್ಟಿಗೆಯಲ್ಲಿ ಹಾಕಿಟ್ಟಾರು ಮಿತಿಮೀರಿ ಸಿಗುತ್ತಿರುವಾಗ್ಗೆ ಮಾಡುವದೇನು ? ದಾನ, ಧರ್ಮ, ಪರೋಪಕಾರ ಇವೇ ಅಲ್ಲವೇ ?

**ವಿಜಯ** : —ಅಲ್ಲವೇ ಮತ್ತೆ.

**ಮುದುವ** :—ಇನ್ನೂ ಇದಕ್ಕೂ ಹೆಚ್ಚಾದರೆ? ಹಿಂದಕ್ಕೆ ಲಂಕೆಯ ರಾವಣನು ತನ್ನ ಮನೆಯ ಗೋಡೆಗಳನ್ನೆಲ್ಲಾ ಬಂಗಾರದ ಇಟ್ಟಂಗಿಗಳಿಂದಲೇ ಕಟ್ಟಿಸಿದ್ದನಂತೆ.

**ಕೃಷ್ಣ** :—ಹಾಂ ಮನೆಯ ಗೋಡೆಗಳನ್ನಲ್ಲ ಕೋಟೆಯ ಗೋಡೆಗಳನ್ನು. ನಿಮ್ಮ ತಪ್ಪನ್ನು ನಾವು ಹಿಡಿದಿದ್ದೇವೆ.

**ವಿಜಯ** :—ಯಾವ ಗೋಡೆಗಳನ್ನೂ ? .... ... ...

**ಮುದುವ** :—ಕೋಟೆಯ ಗೋಡೆಗಳನ್ನೂ. ... ... ...

**ವಿಜಯ** :—ಆಗಲಿ. ಮುಂದೆ.

**ಮುದುವ** :—ಹಾಗೆಯೇ ಬಂಗಾರದ ಇಟ್ಟಂಗಿಗಳಿಂದ ಕಟ್ಟಿಸುವದು ಮತ್ತೇನು ?

**ವಿಜಯ** : —ಅಲ್ಲವೇ ಮತ್ತೆ ಅವೇನು ತಿನ್ನುವ ಪದಾರ್ಥವೇ ? ಉಣ್ಣುವ ಪದಾರ್ಥವೇ ?

**ಮುದುವ** :—ತಿನ್ನುಣ್ಣುವ ಪದಾರ್ಥವಾದರೂ ಹೆಚ್ಚಾದರೆ ತಿಪ್ಪೆಗೆ ಚಲ್ಲುವರು.

**ಕೃಷ್ಣ** : —ತೆಗೆದುಕೋ ಮಾತಿಗೆ ಮಾತು.

**ಮುದುವ** :—ಆಗಲಿ. ಸ್ವಾಮಿ? ತಾವು ನಮ್ಮಲ್ಲಿಗೆ ಬಂದಿರುವಿರಿ. ತಮ್ಮ ತಿಂಡಿ ತೀರ್ಥಗಳ ಏರ್ಪಾಡು ಮಾಡದೇ! ಸುಮ್ಮನೇ ಹಾಳು ರಗಳೆ ಪಂಚಾಂಗವನ್ನು ಬಿಚ್ಚಿದ್ದೇನೆ. ಬಂದೆ. ತಾಳಿ ತಮ್ಮ ಫಲಾಹಾರಕ್ಕಾಗಿ ಏನಾದರೂ ಹಣ್ಣು ಹಂಪಲುಗಳನ್ನು ತರುತ್ತೇನೆ.

**ಕೃಷ್ಣ** :—ಬೇಡ. ಬೇಡ. ನಾವು ಬರುವಾಗ್ಗೆ ಉಪಹಾರವನ್ನು ತೀರಿಸಿಕೊಂಡು ಬಂದಿದ್ದೇನೆ.

**ಮುದುವ** :—ಹಾಗಾದರೆ ತಮ್ಮ ಇಷ್ಟ ನಾನು ಬರಲೊ ?

**ಇಬ್ಬರು** :—ಆಗಲಿ.

**ಮುದುವ** : (ಹೋಗಿಬಂದು) ಸ್ವಾಮೀ! ತಾವು ಮಹಾರಾಜರನ್ನು ಕಾಣುವದಕ್ಕಾಗಿ ಬಂದಿದ್ದಿರೋ ?

**ಕೃಷ್ಣ** :—ಅಹುದು ನಾವು ಬಂದ ಸಂಗತಿಯನ್ನು ತಿಳಿಹಿಸುವದಕ್ಕಾಗಿ ದೂತನೋರ್ವನು ಮಹಾರಾಜರ ಕಡೆಗೆ ಆಗಲೇ ಹೋಗಿದ್ದಾನೆ.

**ಮುದುವ**: —ಹಾಗಾದರೆ ಮಹಾರಾಜರಿನ್ನೂ ಏತಕ್ಕೆ ಬಂದಿರಲಿಕ್ಕಿಲ್ಲ ?

**ಕೃಷ್ಣ** :— (ವಿಚಾರ) ಏತಕ್ಕೆ ಬಂದಿರಲಿಕ್ಕಿಲ್ಲಾ ?

**ಮುದುವ** :—ತಾಳಿ. ನಾನು ನೋಡಿ ಬರುವೆನು. (ಹೋಗಿಬಂದು) ಅದೋ ಮಹಾಸ್ವಾಮಿಯವರು ಬಂದುಬಿಟ್ಟರು.

**ಜಾಂಬುವ**:—(ಪ್ರವೇಶಿಸಿ "ಸ್ವಗತ") ಅಹಹಾ ಏನು ಮನೋಹರ ನಾದ ಮಾನವನೀತನು? (ಪ್ರಕಾಶ) ಮಹಾಪುರುಷನಿಗೆ ನಮಸ್ಕಾರವು ಕುಳಿತುಕೊಳ್ಳಬೇಕು.

**ಕೃಷ್ಣ**:—ಜಾಂಬುವಂತ ಮಹಾರಾಜರು ನಿಲ್ಲುತ್ತಿರುವಾಗ್ಗೆ ನಾವು ಕುಳಿತು ಕೊಳ್ಳುವದು ಯೋಗ್ಯವಾದೀತೇ?

**ರಾಜ**:—ಅಯ್ಯಾ! ದ್ವಾರಕಾನಿವಾಸಿಗಳಾದ ತಾವು ಈ ಧರುಣಿಯಲ್ಲಿ ಪರಮಶ್ರೇಷ್ಠರು. ಅಡವಿಯ ರಾಜನಾದ ನಾನು ತಮ್ಮಗಳ ಸಮಾನ ನಾಗಬಲ್ಲೆನೇ?

**ಕೃಷ್ಣ**:—ಮಹಾನುಭಾವಾ! ದ್ವಾರಕೆಯ ಕೃಷ್ಣರಾಜರೊಬ್ಬರು ಶ್ರೇಷ್ಠ ಪುರುಷರಾದಮಾತ್ರಕ್ಕೆ ಅವರ ಪ್ರಜಾ ಜನರೆಲ್ಲರೂ ಹಾಗಾಗಬಹುದೇ? ಪರಮ ಪಾವನೆಯಾದ ಗಂಗೆಯಲ್ಲಿರುವ ಮೀನಗಳೆಲ್ಲವೂ ಪವಿತ್ರವಾದ ವುಗಳೇ?

**ಮಂದುವ**:—ಬುದ್ಧಿ! ನೋಡಿದಿರಾ? ಹೇಗೆ ಸಮಾಧಾನವನ್ನು ಹೇಳಿ ದರು?

**ರಾಜ**:—ಅಯ್ಯಾ! ಅವರು ಬುದ್ಧಿಶಾಲಿಗಳೂ ಮತ್ತು ಕುಶಲರಾದ ಆರ್ಯ ರಲ್ಲವೇ? ಅಸ್ತು ಮಹನೀಯಾ? ತಾವು ದ್ವಾರಕಾನಿವಾಸಿಗಳೇ?

**ಕೃಷ್ಣ**:—ಅಹುದು.

**ರಾಜ**:—ಒಳಿತಾಯಿತು ಮೊದಲು ಉಪಹಾರಾದಿಗಳನ್ನು ತೀರಿಸಿಕೊ ಳ್ಳುವಾ ಬನ್ನಿ.

**ವಿಜಯ**:—ನಮಗೆ ಹಸಿವೆಯೆ ಆಗಿಲ್ಲವಲ್ಲಾ!

**ಕೃಷ್ಣ**:—ಒಂದೆರಡು ಗಳಿಗೆಗಳ ಪೂರ್ವದಲ್ಲಿಯೇ ನಾವು ಉಪಹಾರವನ್ನು ತೀರಿಸಿಕೊಂಡಿದ್ದೇವೆ.

**ರಾಜ**:—ಪರವಿಲ್ಲ ಅಡವಿಯ ರಾಜನ ಅರಮನೆಯನ್ನಾದರೂ ಸ್ವಲ್ಪ ನೋಡಿಕೊಳ್ಳುವಿರಂತೆ ಬನ್ನಿ.

**ವಿಜಯ**:—ವನರಾಜರೇ! ಇದು ತಮ್ಮ ಸಭಾಮಂಟಪವೇನು?

**ರಾಜ** :– ಅಹುದು ಮಹನೀಯಾ ?

**ವಿಜಯ** :—ಬಹೂ ಚನ್ನಾಗಿದೆ ಅಹಹ ಏನು ಕಂಬಗಳಿವೂ? ನುಣುಪಾದ ಶಿಲೆಗಳಿಂದ ಕಟ್ಟಿಸಿದ ಗೋಡೆಗಳು ಕನ್ನಡಿಗಳಂತಿವೆ.

**ರಾಜ** :—ಏನೋ ಪುರಾತನರು ಬಹೂ ಶ್ರಮಪಟ್ಟು ಕಟ್ಟಿಸಿದ್ದಾರೆ.

**ಕೃಷ್ಣ** :—ಅಹುದಹುದು ಈಗಿನವರಿಂದ ಇಂತಹ ಕಟ್ಟಗಳಾದೀತೆ ?

**ರಾಜ** :—ಆಗಲಿ ಒಳಗೆ ಬನ್ನಿ ಚಂದ್ರಶಾಲೆ, ಭೋಜನಶಾಲೆ, ಸ್ನಾನಾಗಾರ, ದೇವಾಗಾರಾ,

**ಮುದುವ** :—ಹಿತ್ತಲ, ಕೊಟಗಿ,

**ರಾಜ** :—ಮೊದಲಾದವುಗಳನ್ನೆಲ್ಲಾ ತೋರಿಸುವೆವು. (ಹೋಗುವರು)

(ಪ್ರವೇಶ)

**ರೋಹಿಣಿ** :—ಕೃತ್ತಿಕೆ ನೋಡಿದಿಯಷ್ಟೇ ? ಹೇಗಿರುವನು ದ್ವಾರಕಾನಿವಾಸಿಯು ?

**ಕೃತ್ತಿಕೆ** :—ರೋಹಿಣೀ ಏನಾತನ ರೂಪವೇ ? ಆವನಾ ಮಾತುಗಳ ಸೊಲ್ಲು ಎಷ್ಟು ? ಮನೋಹರವಾಗಿವೆ ? ಸಾಮಾನ್ಯ ನಾಗರೀಕನೇ ಹೀಗಿರುವಾಗ್ಗೆ ದ್ವಾರಕೆಯ ಕೃಷ್ಣರಾಜನು ಹೇಗಿದ್ದಾನು ?

**ರೋಹಿಣಿ** :—ಹಾಗಿದ್ದಿರಬಹುದಂತೇ ! ಗೋಪಿಕಾಂಗನೆಯರೆಲ್ಲರೂ ಆತನ ವಿಷಯದಲ್ಲಿಷ್ಟು ಮೋಹಗೊಂಡಿರಬಹುದು.

**ಕೃತ್ತಿಕೆ** :—ಇಂತಹ ಜನಗಳು ಅಡವೆಯ ಜನಗಳಾದ ನಮ್ಮೊಡನೆ ಶರೀರ ಸಂಬಂಧವನ್ನು ಬೆಳೆಸಬಹುದೇ ?

**ರೋಹಿಣಿ** :—ಹಾಗೆ ಭಾವಿಸುವದು ತೀರ ಹುಚ್ಚುತನವು. ನಮ್ಮ ಜಾಂಬುವತೀ ದೇವಿಯವರು ಎಂತಹ ವಿಪರೀತ ಹವ್ಯಾಸವನ್ನು ಹಿಡಿದಿರುವರು ?

**ಕೃತ್ತಿಕೆ** :—ರೋಹಿಣಿ ! ಈ ಜನಗಳು ಎಷ್ಟೇ ಚಂದವಿರಲಿ ಇವರ ಗುಣಗಳೇನು ವಳಿತಿರುವದಿಲ್ಲ ಬಹೂ ಮೋಸಗಾರರು.

**ರೋಹಿಣಿ** :—ಅದು ನಿಜ. ಹೆಂಗಳೆಯರ ವಿಷಯದಲ್ಲಂತೂ ಅವರಿಗೆ ಕನಿಕರವೇ ಇರುವದಿಲ್ಲ ಕೇವಲ ಉತ್ತಮನೆಂದು ಕೊಂಡಾಡಿಸಿಕೊಳ್ಳುವ

ಶ್ರೀರಾಮಚಂದ್ರನು ಸೀತಾದೇವಿಯನ್ನು ನಿರ್ದಯನಾಗಿ ವನಕ್ಕೆ ಅಟ್ಟಿ ಹಾಕಿದ್ದು ನೀನು ಕೇಳಲಿಲ್ಲವೇ ?

**ಕೃತ್ತಿಕೆ** :—ಈಗಿನ ದ್ವಾರಕೆಯ ಕೃಷ್ಣರಾಜನಾದರೂ ತನ್ನ ಗೋಕುಲ ಮಿತ್ರೆಯರಾದ ಗೋಪೀಜನಗಳನ್ನು ವಂಚಿಸಿ ದ್ವಾರಕೆಯಲ್ಲಿ ಬಂದು ಸೇರಿಕೊಂಡಿಲ್ಲವೇ ? ಬಡವರಿಂದ ಬಲ್ಲಿದರ ತನಕ ಆರ್ಯರು ವಿಶ್ವಾಸಕ್ಕೆ ತಕ್ಕವರಲ್ಲ ನಂಬಿದವರ ಕುತ್ತಿಗೆಯನ್ನು ಹೊತ್ತು ಬಂದಕೂಡಲೇ ಕೊಯ್ದು ಚಲ್ಲುವರು.

**ರೋಹಿಣಿ** :—ಅದರಲ್ಲಿ ಆ ದ್ವಾರಕೆಯ ಕೃಷ್ಣರಾಜರಂತೂ ಬಹೂ ಮೋಸಗಾರನಂತೆ. ಸಂಪತ್ತಿಗಾಗಿ ತನ್ನ ಸೋದರಮಾವನನ್ನು ಸಹ ಕೊಂದನಂತೆ. ಇಂತಹ ಪುರುಷನನ್ನು ವರಿಸುವದಕ್ಕಿಂತಲೂ ಸಾಯುತನಕ ಲಗ್ನವಿಲ್ಲದಿರುವದೇ ವಿಹಿತ.

**ಕೃತ್ತಿಕೆ** :—ಅಲ್ಲವೇನು ಮತ್ತೆ ?

**ರೋಹಿಣಿ** :—ಕೃತ್ತಿಕೇ ನಡೆ. ಜಾಂಬುವಂತ ಮಹಾರಾಜರಲ್ಲಿಯೂ ಆ ದ್ವಾರಕಾನಿವಾಸಿಗಳಲ್ಲಿಯೂ ಏನೇನು ಸಂಭಾಷಣೆಗಳು ಜರಗುವವೊ ? ಕೇಳುವಾ ನಡೆ.

**ಕೃತ್ತಿಕೆ** :—ಅದರಿಂದೇನು ಪ್ರಯೋಜನ ?

**ರೋಹಿಣಿ** :—ಜಾಂಬುವತೀ ದೇವಿಯವರು ತಿಳಿದುಕೊಂಡು ಬರುವದಕ್ಕಾಗಿ ಹೇಳಿದ್ದಾರೆ.

**ಕೃತ್ತಿಕೆ** :—ಏನಿದು ಹುಚ್ಚುತನ ? ಕೇವಲ ಭ್ರಮಿಷ್ಟರಾಗಿಬಿಟ್ಟಿದ್ದಾರೆ ಆಗಲಿ ನಡೆ ಹೋಗುವಾ ? ( ಹೋಗುವರು )

( ಪ್ರವೇಶ—ಚಂದ್ರಶಾಲೆ )

**ವಿಜಯ** :—ಅ-ಮ-ಮ-ಮಾ ಏನು ಜಾಂಬುವಂತ ರಾಜನ ವೈಭವವಿದು ಕೃಷ್ಣಯ್ಯಾ ?

**ರಾಜ** :—ಏನಿವರು ಕೃಷ್ಣರಾಜರೇ !

**ಕೃಷ್ಣ** :—ಅಯ್ಯೋ ? ನಾನು ಕೃಷ್ಣರಾಜನಾಗಬಲ್ಲನೇ ? ಮಹಾರಾಜರೇ ನನ್ನ ಹೆಸರು ಕೃಷ್ಣನೆಂದಿರುವದು ಇಷ್ಟೆ !

**ರಾಜ** :—ಸರಿ. ದೊಡ್ಡವರ ಹೆಸರುಗಳನ್ನು ಮನೆ ಮನೆಗೂ ಇಟ್ಟುಕೊಳ್ಳುವ ರೂಢಿಯು ಎಲ್ಲ ಕಡೆಗೂ ಇದೆ.

**ವಿಜಯ** :—ನಿಶ್ಚಯ. ನಿಶ್ಚಯ. ತಾವು ಹೇಳುವಂತೆ ನಮ್ಮ ದ್ವಾರಕೆಯಲ್ಲಿ ತುಸು ಹೆಚ್ಚು ಕಡಿಮೆ ಮಾಡಿ ಕೃಷ್ಣರಾಜರ ಹೆಸರನ್ನು ಮನೆ ಮನೆಗೂ ಇಟ್ಟುಕೊಂಡಿದ್ದಾರೆ.

**ರಾಜ** :—ಆ ಪದ್ಧತಿಯು ಇಲ್ಲಿಯಾದರೂ ಇದೆ.

**ವಿಜಯ**.— ತದನುಸಾರವಾಗಿಯೇ ನನ್ನ ಮಿತ್ರನ ಹೆಸರು ಸಂತಾನಗೋಪಾಲಕೃಷ್ಣಯ್ಯನೆಂದು ಈತನ ತಂದೆತಾಯಿಗಳು ಇಟ್ಟಿದ್ದಾರೆ. ಆದರೆ ಅದು ಕೊಂಚ ದೀರ್ಘವಾಗುವದೆಂದು ನಾನು ಬರೇ ಕೃಷ್ಣಯ್ಯನೆಂದು ಹೇಳಿದೆನು.

**ಮುಂದುವ** :— (ಕೃಷ್ಣನನ್ನು ಪರೀಕ್ಷಿಸಿ ನೋಡಿ) ಮಹಾಸ್ವಾಮೀ! ಒಂದು ಸಾರೆ ನಾರದ ಮುನಿಗಳು ಇಲ್ಲಿಗೆ ಬಂದಾಗ್ಗೆ ಅವರು ದ್ವಾರಕೆಯ ಶ್ರೀಕೃಷ್ಣ ಮಹಾರಾಜರ ರೂಪಗುಣಾದಿಗಳ ವರ್ಣನೆಯನ್ನು ಮಾಡಿದ್ದರು. ಅವರು ಮಾಡಿದ ವರ್ಣನೆಯಂತೆ ಇವರ ರೂಪವಿಲ್ಲವೇ ?

**ಕೃಷ್ಣ** :—ಅಯ್ಯಾ! ದ್ವಾರಕೆಯ ಯುವರಾಜರನ್ನು ನೀವು ಪ್ರತ್ಯಕ್ಷವಾಗಿ ನೋಡಿಲ್ಲವೆಂದು ಹೀಗೆ ಹೇಳುವಿ. ಅವರ ರೂಪವೆತ್ತ? ಸಾಮಾನ್ಯ ಮಾನವನಾದ ನನ್ನ ರೂಪವೆತ್ತ ?

ರಾಗ ನಾಟ್ಯಸಾವತಿ ॥ ತಾಳ ॥ ಧುಮಾಳಿ

॥ **ಪದ** ॥ ಸರಿಯಾಗದೀತೆರ ಯೋಚಿಸುವದು।
ಹರಿಯೆಂದು ಕ್ಷುದ್ರನರನನ್ನು ನೀವು ॥ ಪಲ್ಲ ॥
ದೇವರಾಜನಂಥ ದಿವ್ಯರೂಪವೆತ್ತ । ಸಾಮಾನ್ಯ ಮಾನ।
ವ ರೂಪವೆತ್ತ । ಯಾದವೇಂದ್ರನನ್ನು ನೋಡಿಲ್ಲ।
ವೆಂದೂ । ಇದುವರೆವಿಗೂ ಹೀಗನ್ನುವಿರಿ ॥ ೧ ॥

**ಮುಂದುವ** :—ಆದರೂ ನಾರದರ ವರ್ಣನೆಯು ತಮ್ಮನ್ನನ್ವಯಿಸುವದೆಂದು ನನ್ನ ತರ್ಕವಿದೆ.

**ವಿಜಯ** :—ಹಾಗಾಗುವದಕ್ಕೆ ಮತ್ತೂ ಒಂದು ಕಾರಣವುಂಟು.

**ಕೃಷ್ಣ** :—ಹೇಳೊ! ಇದ್ದ ಕಾರಣಗಳನ್ನೆಲ್ಲಾ.

**ವಿಜಯ** :—ಅದೇನಂದರೆ ನನ್ನ ಮಿತ್ರನು ಶ್ರೀಕೃಷ್ಣರಾಜರಂತೆ ಉಡುಪುಗಳನ್ನು ಮಾಡಿಕೊಂಡಿದ್ದಾನೆ. ಅಂತೇ ತಮಗೆ ಹಾಗೆ ಭಾಸವಾಯಿತು ಜಗದಲ್ಲಿ ನಡೆಯಲ್ಲಾಗಲಿ, ನುಡಿಯಲ್ಲಾಗಲಿ, ವೇಷಗಳಲ್ಲಾಗಲಿ, ಸಣ್ಣವರು ಸಾಧ್ಯವಾದಮಟ್ಟಿಗೆ ದೊಡ್ಡವರ ಅನುಕರಣವನ್ನು ಮಾಡುತ್ತಿರುತ್ತಾರೆ.

**ರಾಜ** :—ಅದೂ ಸರಿಯೇ.

**ವಿಜಯ** :—ನೋಡಿ. ನಮ್ಮ ದೇಶದಲ್ಲಿ ಮೊದಲು ನವಲುಗರಿಗಳನ್ನು ಯಾರೂ ಇಕ್ಕಿಕೊಳ್ಳುತ್ತಿದ್ದಿಲ್ಲ ಶ್ರೀಕೃಷ್ಣರಾಜರೊಬ್ಬರು ಹಾಗೆ ಮಾಡಿದ ಮಾತ್ರಕ್ಕೆ ಇಡೀ ದೇಶವೇ ಅದನ್ನು ಅನುಕರಣ ಮಾಡಿತು. ಪುಣ್ಯಕ್ಕೆ ನವಿಲುಗರಿಯನ್ನು ತಲೆಯಲ್ಲಿ ಚುಚ್ಚಿಕೊಳ್ಳುವಂತೆ ಕಾಗೆ ಹದ್ದುಗಳ ಗರಿಗಳನ್ನು ಚುಚ್ಚಿಕೊಂಡಿದ್ದರೆ ಕಾಗೆ ಹದ್ದುಗಳು ಗರಿಗಳನ್ನು ಕಿತ್ತುವರೆಂಬ ಭಯದಿಂದ ದೇಶಬಿಟ್ಟು ದಿಕ್ಕುಪಾಲಾಗಿ ಹೋಗುತ್ತಿದ್ದವು.

**ರಾಜ** :—ಅಯ್ಯಾ! ನಮ್ಮ ನಿಮ್ಮ ನಾಡಿನ ನಡಾವಳಿಗಳನ್ನು ಬಿಡಿ. ಕಿಷ್ಕಿಂದೆಯ ನಾಡಿನ ಜನಗಳನ್ನು ತಾವು ನೋಡಿರುವಿರಾ?

**ಕೃಷ್ಣ** :—ಇಲ್ಲ. ಇಲ್ಲ. ಅಲ್ಲಾವ ರೂಢಿಯು ರೂಢವಾಗಿದೆ?

**ರಾಜ** :—ಅಲ್ಲಿಯ ರಾಜರು ನಡುಕಟ್ಟಿನ ತುದಿಯನ್ನು

**ವಿಜಯ** :—(ಕೃಷ್ಣನಿಗ) "ನಡುಕಟ್ಟು".

**ಕೃಷ್ಣ** :—ನಡುವಿನ ಕಟ್ಟು "ನಡುಕಟ್ಟು"

**ವಿಜಯ** :—ಒಹೋ ಷಷ್ಟೀತತ್ಪುರುಷ ಸಮಾಸವೊ?

**ರಾಜ** :—ಆ ನಡುಕಟ್ಟಿನ ತುದಿಯನ್ನು ಬಾಲದೋಪಾದಿಯಲ್ಲಿ ಚಂದಕ್ಕಾಗಿ ಸ್ವಲ್ಪಮಟ್ಟಿಗೆ ಹಿಂಭಾಗವಲ್ಲಿ ನೇತುಬಿಡುತ್ತಿದ್ದರಂತೆ.

**ಮಾಧವ** :—ಬುದ್ಧಿ! ನಾವು ಇಲ್ಲಿ ಬಿಡುತ್ತೇವೆ ಅವರು ಇಲ್ಲಿ ಬಿಡುತ್ತಿದ್ದರಂತೆ.

**ಕೃಷ್ಣ** :—ಅಸ್ತು ಜಾಂಬುವಂತ ರಾಜರೇ ಇದು ತಮ್ಮರಮನೆಯ ಯಾವ ಭಾಗವು ?

**ರಾಜ**.—ಇದಕ್ಕೆ ಚಂದ್ರಶಾಲೆಯನ್ನುತ್ತಾರೆ.

**ವಿಜಯ** :—ಎಲ್ಲ ಕಡೆಗೂ ಚಂದ್ರ (ಸೂರ್ಯ) ಪ್ರಕಾಶ ಬೀಳಲಿಕ್ಕೆ ಅನುಕೂಲವಿದ್ದಮೂಲಕ ಇದಕ್ಕೆ ಚಂದ್ರಶಾಲೆಯೆಂಬ ನಾಮವು ಒಪ್ಪುವದು.

**ಕೃಷ್ಣ** :—ಹಾಗಲ್ಲ ಚಂದ್ರಾಕಾರವಿದ್ದಮೂಲಕ ಇದಕ್ಕೆ ಚಂದ್ರಶಾಲೆಯೆಂಬ ನಾಮವನ್ನಿಟ್ಟಿದ್ದಾರೆ

**ರಾಜ** :—ಅಸ್ತು ಪಾರುಪತ್ಯಗಾರನೇ ! ದೇವರ ಮನೆಗೆ ನಡೆ. ಅಲ್ಲಿಯ ವೈಭವವನ್ನಷ್ಟು ತೋರಿಸುವಾ !

**ಮುದುವ** :—ಅಪ್ಪಣೆ ದಯಮಾಡಿಸಬೇಕು.

( ದೇವರ ಮನೆ )

**ರಾಜ** :—ಸ್ವಾಮೀ ! ದ್ವಾರಕಾನಿವಾಸಿಗಳೇ ! ಇದು ನಮ್ಮರಮನೆಯ ದೇವರ ಮನೆಯು. ಆ ಮುಖ್ಯಸ್ಥಾನದಲ್ಲಿರುವ ಶಿವಲಿಂಗವೇ ನಮ್ಮ ಕುಲದೇವರು.

**ವಿಜಯ** :—ಬಲಭಾಗದಲ್ಲಿ ಮೂರು ವಿಗ್ರಹಗಳಾವದೇವರು ?

**ರಾಜ** :—ಅವು ನಮ್ಮ ಇಷ್ಟದೇವತೆಗಳಾದ ರಾಮ ಲಕ್ಷ್ಮಣ ಸೀತೆಯರ ವಿಗ್ರಹಗಳು. ರಾಮಾವತಾರ ಸಮಾಪ್ತಿಯ ಕಾಲದಲ್ಲಿ ನಮ್ಮ ಮೂಲಪುರುಷರಾದ ಜಾಂಬುವಂತ ದೇವರು ... ... ...

**ಕೃಷ್ಣ** :—ಕೇಳಬಲ್ಲೆವು ರಾಮದೇವರ ಸೇವೆಯನ್ನು ಬಹು ಭಕ್ತಿವಿಶ್ವಾಸದಿಂದ ಮಾಡಿದ ಭಕ್ತೋತ್ತಮರು. ಮತ್ತು ರಾಮ ರಾವಣರ ಯುದ್ಧದಲ್ಲಿ ಅತುಲ ಪರಾಕ್ರಮವನ್ನು ತೋರಿದ ಬಲಶಾಲಿಗಳು.

**ರಾಜ** :—ಅದೇ ಜಾಂಬುವಂತ ದೇವರೇ ಈ ವಿಗ್ರಹಗಳ ಪ್ರತಿಷ್ಠಾಪನೆಯನ್ನು ಮಾಡಿದ್ದಾರೆ. ಈ ದೇವತೆಗಳೇನು ಸಾಮಾನ್ಯರಲ್ಲ.

ರಾಗ॥ ಭೂಪ॥ ತಾಲ॥ ಧ್ರುವತಾಳಿ॥

॥ **ಪದ** ॥ ಬೇಗ ವರವನ್ನು ನೀಡಿ । ಪೊರೆವಂಥಾ ನಮ್ಮ ದೇವರು ।
ಅನುದಿನ ಭಜಿಸುವ ಭಕುತರನು ॥ ಪಲ್ಲ ॥
ಪಾತಕವನ್ನು ದಹಿಸಿ ಪೊರೆವಂಥಾ ನಮ್ಮ ದೇವರು ॥ ಅ ॥ ಪ
ಈ ದೇವರಂಥ। ವರ ದೇವರಿಲ್ಲ । ಸದುಭಾವದಿಂದ ।
ಮೊರೆಬರುವ ಬಕುತರನು । ಸಾವಕಾಶ ಮಾಡದೇ ।
ಸಕಲ ಸೌಭಾಗ್ಯವಿತ್ತು ಇಹಪರದಿನ್ನೈಜ ॥ ೧ ॥

**ಕೃಷ್ಣ** :— ( ಸುತ್ತ ನೋಡಿ ) ಇದೇನು ಈ ಜಗುಲಿಯ ಮೇಲಿರುವುದು ?

**ವಿಜಯ** :—ಒಂದು ಪ್ರಕಾಶಮಾನವಾದ ಮಣಿಯಾಗಿದೆ.

**ರಾಜ** :—ಅದೇ ನೋಡಿ ನಮ್ಮರಮನೆಯ ಭಾಗ್ಯಶಿರಿಯು. ಮಿತ್ರರೇ ಒಂದು ದಿನ ಬೇಟಿಯನ್ನಾಡಲಿಕ್ಕೆ ಹೋದಾಗ್ಗೆ ಶ್ರೀ ರಾಮೇಶ್ವರನ ಕೃಪೆಯಿಂದ ಈ ಮಣಿಯು ನನಗೆ ಲಭಿಸಿತು ಇದು ಸಾಮಾನ್ಯ ಮಣಿ ಯಾಗಿದ್ದರೆ! ನಾನೇನು ದೇವರ ಜಗುಲಿಯ ಮೇಲಿಟ್ಟು ಪೂಜಿಸು ತ್ತಿದ್ದಿಲ್ಲ. ಆದರೆ ಇದು ಸಾಕ್ಷಾತ್ ಲಕ್ಷ್ಮಿಯೇ ಮಣಿ ರೂಪದಿಂದ ಒಂದಿದ್ದಾಳೆಂದು ನಿಶ್ಚಯಿಸಿ ಇಲ್ಲಿರಿಸಿ ನಿತ್ಯದಲ್ಲಿಯೂ ಪೂಜಿಸುತ್ತಲಿ ದ್ದೇನೆ.

**ಕೃಷ್ಣ** :—ಇದು ಲಕ್ಷ್ಮಿಯ ಅವತಾರವೆಂದೇತರಮೇಲಿಂದ ನಿರ್ಧರಿಸಿದಿರಿ?

**ರಾಜ** :—ಅದರ ಪರಿಷ್ಕಾರವು ಅನಾಯಾಸವಾಗಿ ಸಂಧ್ಯಾಸಮಯವಾಗಿವೆ ಇಷ್ಟರಲ್ಲಿಯೇ ಪ್ರತ್ಯಕ್ಷವಾಗುವದು ತಾಳಿ. ಪಾರುಪತ್ಯಗಾರರೇ ಆರು ತಿಯು ಸಿದ್ಧವಿರುವದೇ ?

**ಮುದುಕ** :—ಇರುವದು ಬುದ್ಧಿ ! ಪೂಜಾರ್ಯರು ಅದೇ ಹಾದಿಯನ್ನು ನೋಡುತ್ತಲಿದ್ದಾರೆ—ಬನ್ನಿ ಸ್ವಾಮಿ ! ಪೂಜಾರ್‍ರ್ಯಾಚಾರ್‍ರ್ರೆ ! ಆಚಾರ್‍ರ್ರ ಪೂಜಾರ್‍ರ್ರೆ !

**ರಾಜ** :—ಸಾಗಲಿ ಲಕ್ಷ್ಮೀ ಪೂಜೆಯು.

ಪೂಜೆ, ಆರುತಿಯಾಗುವದು. ಮಣಿಯಿಂದ ಬಂಗಾರ ಬೀಳುವದನ್ನು ಇಬ್ಬರೂ ನೋಡು ತ್ತಿರುವರು.)

**ಜಾಂಬುವಂತರಾಜ:—**

ರಾಗ॥ ಸೊಹನಿ॥ ತಾಲ॥ ತ್ರಿಪಟ॥

॥ **ಪದ** ॥ ಜೈ ಜಗಜ್ಜನನಿಯೇ । ಬಾರೇ । ಕ್ಷೀರಸಾಗರ ತನಯೇ ।
ಸುರಮುನಿ ದೇವದಾನವಾರ್ಚಿತೇ ಜನನಿಯೇ॥ ಶ್ರೀಮನ್ನಾರಾ ॥
ಯಣಿ ಮನೋಹರಿ । ಕಾಮಿತಾರ್ಥವನ್ನೀಯುವ । ಕಮಲೆಯೆ ಬಾ ॥ ೧ ॥

**ವಿಜಯ**:—ಅದೇನು ಮಣಿಯ ಕೆಳಭಾಗದಲ್ಲಿ ಧಾರೆಯಾಗಿ ಬೀಳುತ್ತಿರುವದು?

**ರಾಜ**:—ಅದು ಭಂಗಾರವು.

**ಕೃಷ್ಣ**:—ಏನು ಮಣಿಯಿಂದ ಪ್ರಸವಿಸುತ್ತಿರುವದೇ?

**ರಾಜ**:—ಅಹುದು.

**ಕೃಷ್ಣ**:—ವಿಜಯಾ! ನಮ್ಮ ಉದ್ದೇಶ್ಯವು ಸಫಲವಾಯಿತಷ್ಟೆ!

**ರಾಜ**:—ಉದ್ದೇಶ್ಯವೇನು? ಮತ್ತು ಅದು ಸಫಲವಾದ ಬಗೆ ಹೇಗೆ?

**ಕೃಷ್ಣ**:—ಜಾಂಬುವಂತ ರಾಜನೇ! ಈ ಮಣಿಯ ವೃತ್ತಾಂತವನ್ನು ಕೇಳು. ಇದು ನಮ್ಮ ದ್ವಾರಕೆಯಲ್ಲಿ ಪ್ರಸೇನನೆಂಬ ಯಾದವ ಸರ್ದಾರನು ಸೂರ್ಯೋಪಾಸನೆಯನ್ನು ಮಾಡಿ ಸಂಪಾದಿಸಿದ ಮಣಿಯು. ಈಗ್ಗೆ ಮೂರುತಿಂಗಳಾಚೆಯಲ್ಲಿ ಇದನ್ನು ಕೊರಳಲ್ಲಿ ಧರಿಸಿಕೊಂಡು ಮೃಗಯಾರ್ಥ ಹೋದ, ಅವನು ತಿರಿಗಿ ಬರಲಿಲ್ಲ ಮಾಯವಾಗಿಬಿಟ್ಟಿದ್ದಾನೆ.

**ರಾಜ**:—ಸರಿ ಅವನು ಮೃತನಾದನು.

**ವಿಜಯ**:—ಏನು? ಮೃತನಾದನೇ! ಯಾರಿಂದ?

**ರಾಜ**:—ಒಂದು ಶಾರ್ದೂಲವು ಅವನನ್ನು ಕೊಂದು ತಿನ್ನುತ್ತಿರುವಷ್ಟರಲ್ಲಿ ನಾನದನ್ನು ಪಕ್ಕನೇ ನೋಡಿ ಬಾಣದಿಂದ ಹೊಡೆದು ಆ ಮೃಗವನ್ನು ಕೊಂದೆನು. ಮತ್ತು ಹತ್ತಿರಕ್ಕೆ ಹೋಗಿ ನೋಡುವಷ್ಟರಲ್ಲಿ ಆ ಮೃತನ ಅವಶಿಷ್ಟ ಅವಯವಗಳ ಜತೆಯಲ್ಲಿ ಕಿರೀಟಕುಂಡಲಗಳೂ, ಮತ್ತು ಬಿಲ್ಲುಬತ್ತಳಿಕೆಗಳೂ, ಅಲ್ಲದೇ ಈ ಮಣಿಯನ್ನು ಪದಕದಲ್ಲಿರಿ

ಸಿದ ಒಂದು ಹಾರವೂ ಬಿದ್ದಿತ್ತು. ಕೂಡಲೇ ಅವೆಲ್ಲವುಗಳನ್ನೂ ಸ್ವಾಧೀನಪಡಿಸಿಕೊಂಡು ಮನೆಗೆ ಬಂದೆನು ಅಷ್ಟಕ್ಕೇ ಸಂಧ್ಯಾಸಮಯ ವಾಗಿತ್ತು. ಈ ಮಣಿಯು ತನ್ನ ಪದ್ಧತಿಯಂತೆ ಸುವರ್ಣವನ್ನು ಚಲ್ಲುತ್ತಿರುವದನ್ನು ಕಂಡೆನು. ಮೊದಮೊದಲು ಆಶ್ಚರ್ಯವಾಯಿತು ನಿತ್ಯದಲ್ಲಿಯೂ ಇದೇ ಪ್ರಕಾರವನ್ನು ನೋಡಿ ಇದು ಮಣಿಯ ರೂಪ ದಿಂದ ಅವತರಿಸಿ ಬಂದ ಲಕ್ಷ್ಮಿಯೆಂದು ತಿಳಿದು ದೇವರ ಮನೆಯಲ್ಲಿ ರಿಸಿ ಪೂಜಿಸುತ್ತಿರುವೆನು.

ಕೃಷ್ಣ :—ಸರಿ ವಿಧಿಪ್ರಮಾಣದಂತೆ ಸಕಲ ಕಾರ್ಯಗಳಾಗುತ್ತವೆ. ಅಸ್ತು ಜಾಂಬುವಂತ ರಾಜನೇ! ಈ ಮಣಿಯನ್ನು ನೀನು ಆ ಮೃತನ ಅಣ್ಣ ನಾದ ಸತ್ರಾಜಿತನೆಂಬ ಬಲಶಾಲಿಯಾದ ಯಾದವ ಸರ್ದಾರನಿದ್ದಾನೆ. ಈವನ ವಶಕ್ಕೆ ಕೊಟ್ಟುಬಿಡು. ಯಾಕೆಂದರೆ ಇದರ ಬಾಧ್ಯಸ್ತನು ಅವನೇ!

ರಾಜ :—ಅದಾಗದ ಮಾತು ಮಹಾಮಹಿಮೆಯುಳ್ಳ ಮಣಿಯನ್ನು ಅಪ ಹರಿಸುವದಕ್ಕಾಗಿ ಇದೊಂದು ಉಪಾಯವನ್ನು ಯೋಚಿಸಿದಿರಾ?

**ವಿಜಯ** :—ಉಪಾಯವೇನು? ನಾವು ದ್ವಾರಕೆಯಿಂದ ಹೊರಟದ್ದೇ ಈ ಮಣಿಯ ಸಲುವಾಗಿ.

**ಜಾಂಬು** :—ಇದ್ದಿರಬಹುದು. ಪಾಪ ನೀನಾದರೂ ಇವನ ಮಿತ್ರ ನಲ್ಲವೇ ಅಂದ ಬಳಿಕ ಈತನ ವಿಚಾರಗಳನ್ನು ಪುಷ್ಟಿಕರಿಸಲಿಕ್ಕೇ ಬೇಕು.

ಕೃಷ್ಣ .—ಜಾಂಬುವಂತ ರಾಜನೇ ನಾವು ಸುಳ್ಳಾಡುವದಿಲ್ಲ.

**ಜಾಂಬುವಂತ** :— ಹಾಗೆಂದಾರು ಹೇಳಿದರು? ನೀವು ಪ್ರಯೋಜನ ವಿಲ್ಲದೇ ಸುಳ್ಳಾಡುವದಿಲ್ಲವೆನ್ನುವದನ್ನು ನಾನು ಬಲ್ಲೆನು.

ವಿಜ**ಯ** :—ಅಂದರೆ ಈಗ್ಗೆ ನಾವು ಪ್ರಯೋಜನವಿರುವದೆಂದು ಸುಳ್ಳು ಹೇಳುವೆವೋ.

**ಜಾಂಬು** :—ಅದು ನಿಮ್ಮ ಮನಕ್ಕೆ ಗೊತ್ತು.

ಕೃಷ್ಣ :—ಜಾಂಬುವಂತ ರಾಜನೇ ಖಂಡಿತವಾಗಿ ನಾವು ಸುಳ್ಳು ಹೇಳುವ ದಿಲ್ಲ ಪ್ರಮಾಣಪೂರ್ವಕವಾಗಿಯೂ ಸತ್ಯವದೆ.

**ಜಾಂಬು** :— ಇದ್ದಿರಬಹುದು ಈಶಾನುಗ್ರಹದಿಂದ ಸಿಕ್ಕ ಮಣಿಯನ್ನು ನಾನು ಯಾರಿಗೂ ಕೊಡತಕ್ಕವನಲ್ಲ ಅಲ್ಲದೇ ನೀವಾವರೂ ನನ್ನಿಂದ ತೆಗೆದುಕೊಳ್ಳುವ ಹವ್ಯಾಸಕ್ಕೆ ಬೀಳಬೇಡಿ.

ವಿಜ**ಯ** :—ಅಯ್ಯಾ ಜಾಂಬುವಂತ ರಾಜನೇ ಪರರ ವಸ್ತುವಿನ ಮೇಲೆ ಹೀಗೆ ನೀನು ಅನ್ಯಾಯವಾಗಿ ನಿನ್ನ ಸ್ವಾಮಿತ್ವವನ್ನು ಸ್ಥಾಪಿಸಬಹುದೇ.

**ಜಾಂಬು** :—ಓಹೊ-ಹೊ. ನ್ಯಾಯಾನ್ಯಾಯದ ಪಾಠವನ್ನು ಆರ್ಯ ರಾದ ನೀವು ನಮಗೆ ಬೋಧಿಸಲು ಬಂದಿರುವರಾ? ಸಾಕು ಸಾಕು. ಅಷ್ಟಕ್ಕೇ ನಿಲ್ಲಿಸಿಬಿಡಿ.

ಕೃಷ್ಣ :—ಅಯ್ಯಾ ವನರಾಜನೇ ದ್ವಾರಕಾನಿವಾಸಿಯ ಮಣಿಯನ್ನು ನೀನು ಸ್ವಾಧೀನಪಡಿಸಿಕೊಂಡದ್ದು ಅನ್ಯಾಯವಲ್ಲವೇ.

**ಜಾಂಬು** :- ಈ ಧರ್ಮಸಿಂಧುವನ್ನು ನನ್ನ ಮುಂದೆ ಬಿಚ್ಚಬೇಡಿ. ಅದು ನಿಮ್ಮ ಅಧಿಕಾರವಲ್ಲ.

ಕೃಷ್ಣ :—ಏಕೆ ಏಕೆ ಅಧಿಕಾರವಲ್ಲ? ನ್ಯಾಯಾನ್ಯಾಯ ವಿಮರ್ಶೆಯನ್ನು ಮಾಡುವದು ತಪ್ಪೆ!

**ಜಾಂಬು** :—ಅದನ್ನಾರು ಮಾಡಬೇಕು? ಕೇವಲ ನ್ಯಾಯವಂತರು ಮಾಡಬೇಕು. ಸದಾವಕಾಲದಲ್ಲಿಯೂ ಅನ್ಯಾಯದಿಂದ ನಡಿಯುವ ಆರ್ಯರಿಗೆ ನ್ಯಾಯನಿರ್ಣಯವನ್ನು ಮಾಡುವ ಅಧಿಕಾರವಿಲ್ಲ.

**ವಿಜಯ** :—(ಏಂಹೋಗಿ) ಏನು ಆರ್ಯರು ಅನ್ಯಾಯದಿಂದ ನಡಿಯುವರೇ.

**ಜಾಂಬು** :—ಅಯ್ಯಾ ಆರ್ಯಮಹಾಶಯರೇ ನೀವೆಂತಹ ನ್ಯಾಯಾನು ವರ್ತಿಗಳು ಕೇವಲ ಧರ್ಮ ಶ್ರವಣವನ್ನು ಮಾಡಿಸಲಿಕ್ಕೆ ಬಂದಿರುವಿರಿ ನೀವು ವಾಸಿಸುವ ದೇಶವಾವದು? ಮೂಲನಿವಾಸಿಗಳಾದ ನಮ್ಮದಲ್ಲವೇ ನಮ್ಮ ಜನಾಂಗದ ಕೊಲೆಯನ್ನು ಮಾಡಿ ನೀವದನ್ನು ಸಂಪಾದಿಸಿ ಲ್ಲವೇ. ಅದು ಬಿಡಿ; ನೀವು ನಿಮ್ಮ ನಿಮ್ಮಲ್ಲಿಯೇ ಒಬ್ಬರ ರಾಜ್ಯವನ್ನು

ಮತ್ತೊಬ್ಬರು ಅಪಹರಿಸುತ್ತಿರುವಿರಲ್ಲವೇ. ಅದು ನ್ಯಾಯವೇ ನಿಮ್ಮ ರಾಜನಾದ ಕೃಷ್ಣನು ಮೊದಲು ಗೊಲ್ಲನು. ಈಗ್ಗೆ ಬಂಗಾರದ ದ್ವಾರಕೆಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿರುವಂತೆ ಆ ಸಂಪತ್ತಿಯನ್ನವನು ಎಲ್ಲಿಂದ ತಂದನೋ ಘನವಂತರಾಗಿ ಮೆರೆದಾಡುವ ನಿಮ್ಮ ಮೂಲಚರಿತ್ರೆಯನ್ನು ನೋಡಹೋದರೆ ಅಲ್ಲಿ ಅನ್ಯಾಯದ ಕತ್ತಲೆಯು ಮುಸುಕಿದೆ ಕೊಲೆಯ ದುರ್ಗಂಧವೇ ತುಂಬಿದೆ; ಅಯ್ಯಾ ಸುಶೀಕ್ಷಿತರಾದ ಆರ್ಯಮಹಾಶಯರೇ ದೇವರು ನಿರ್ಮಿಸಿಕೊಟ್ಟ ಸ್ವತಂತ್ರ ಜೀವಿಗಳನ್ನು ಪಾರತಂತ್ರ್ಯ ನರಕದಲ್ಲಿ ತುಳಿದು ಮೇಲೆ ನೀತಿನಿರೂಪಣೆಯನ್ನು ಮಾಡುವದಕ್ಕೆ ನಿಮಗೆ ನಾಚಿಕೆಯಾಗುವದಿಲ್ಲವೇ ಈ ನಿಮ್ಮ ಹೇಯವಾದ ಮಹತ್ವಾಕಾಂಕ್ಷೆಯು ಕಲಿಯುಗವನ್ನು ಸಮೀಪಕ್ಕೆ ಕರೆಯುತ್ತಲಿದೆ ಸಾಕುಮಾಡಿ ನಿಮ್ಮ ಧರ್ಮಶ್ರವಣವನ್ನು.

ಕೃಷ್ಣ :—ಅಯ್ಯಾ! ವನರಾಜನೇ! ವಿದ್ವತ್ಪೂರ್ಣವಾದ, ಘನಗಾಂಭೀರ್ಯವಾದ, ಆವೇಶಯುಕ್ತವಾದ ನ್ಯಾಯಾನ್ಯಾಯ ವಿಮರ್ಶೆಯೊತ್ತಟ್ಟಿಗಿರಲಿ. ಆ ಮಣಿಯು ನಮ್ಮದು. ನಮಗೆ ಕೊಟ್ಟುಬಿಡು ನಮ್ಮ ಮೇಲೆ ನಿನಗೆ ವಿಶ್ವಾಸವಿಲ್ಲದಿದ್ದರೆ ನೀನೇ ದ್ವಾರಕೆಯ ತನಕ ಬಂದು ಅಲ್ಲಿದಕ್ಕೆ ಬಾಧ್ಯಸ್ಥನಾದ ಸತ್ರಾಜಿತನೆಂಬ ಯಾದವ ಸರ್ದಾರನಿದ್ದಾನೆ ಅವನ ಸ್ವಾಧೀನಪಡಿಸು.

**ಜಾಂಬುವಂತ** :—ಇಂಥವೆಲ್ಲ ಶುಷ್ಕ ಸಮಾಚಾರವನ್ನು ನನಗೆ ಹೇಳಬೇಡಿ ಮಣಿಯು ನನಗೆ ಅನಾಯಾಸವಾಗಿ ಸಿಕ್ಕಿದೆ ಯಾರಿಂದಲೂ ನಾನದನ್ನು ಒತ್ತಾಯದಿಂದ ತಂದಿಲ್ಲ ಮತ್ತು ಯಾರಿಗೂ ಅದನ್ನು ಕೊಡತಕ್ಕವನಲ್ಲ, ಸುಮ್ಮನೆ ವಾದವನ್ನು ಬೆಳಿಸಬೇಡಿ.

ಕೃಷ್ಣ :—ಆ ಮಣಿಯು ನಮ್ಮದು ನಾವದನ್ನು ವಶಪಡಿಸಿಕೊಳ್ಳದೇ ಬಿಡುವದಿಲ್ಲ.

**ಜಾಂಬು** :—ಅಯ್ಯಾ! ಪ್ರವಾಸಿಯೇ? ಅತಿಥಿಯಾಗಿ ಬಂದಿರುವೆಯೆಂದು ನೀನಾಡುವ ಮಾತುಗಳನ್ನು ಧರ್ಮಕ್ಕೆ ಕಟ್ಟುಬಿದ್ದು ಸಹಿಸಬೇಕಾಗಿದೆ. ಇಲ್ಲದಿದ್ದರೇ?



ಜಾಂಬುವಂತ:- ಮಾನವರಿಗೆ ಕರಡಿಯೆಂದು ಹೇಳುವ ನಿನ್ನ ಸೊಕ್ಕನ್ನು ಮುರಿದುಬಿಟ್ಟೇನು.

**ಕೃಷ್ಣ** :—ಇಲ್ಲದಿದ್ದರೇನಾಗುತ್ತಿತ್ತು ?

**ಜಾಂಬು** :—ಇಲ್ಲದಿದ್ದರೆ ನಿಮ್ಮ ದೇಹವು ಚೂರ್ಣವಾಗುತ್ತಿತ್ತು.

**ವಿಜಯ** :—ಅದೇಕೆ ? ಅದೇಕೆ ? ಚೂರ್ಣವಾಗುತ್ತಿತ್ತು.

**ಜಾಂಬು**;—ಈ ಜಾಂಬುವಂತನು ನಿಮ್ಮ ಕಾಲುಗಳನ್ನು ಹಿಡಿದು ತಿರಿತಿರಿವಿ ಬಂಡೆಗೆ ಬಡಿಯುವ ಕಾಲಕ್ಕೆ ಚೂರ್ಣವಾಗದೇ ಬಿಟ್ಟೀತೇ ?

**ವಿಜಯ** :—ಅಬ್ಬಬ್ಬಾ. ಒಳಿತಾಗಿ ಉಳಿದುಕೊಂಡಿದ್ದೇನೆ. ಕೃಷ್ಣಯ್ಯಾ ಮೊದಲು ದ್ವಾರಕೆಗೆ ಹೋಗುವಾ ನಡೆ.

**ಕೃಷ್ಣ** : ಏನು ? ಈ ಕರಡಿಯ ಮಾತುಗಳಿಗೆ ಭಯಗೊಂಡೆಯಾ.

**ಜಾಂಬುವಂತ** :—ಸುಮ್ಮನಿರು ಹಾಗೆ ಹೇಳಬೇಡ ಮಾನವನಿಗೆ ಕರಡಿ ಎಂದು ಹೇಳುವ ನಿನ್ನ ಸೊಕ್ಕು ಮುರಿದುಬಿಟ್ಟೇನು.

**ಕೃಷ್ಣ** : -ಅವನ್ನು ಮರೆ ಆರ್ಯರು ಹೀಗೆ ಪಶುಗಳಿಗೆ ಅಂಜತಕ್ಕವರಲ್ಲ.

**ಜಾಂಬು** :—ಎಲೋ ನೀನೇನು ದುಶ್ಶಬ್ದಗಳನ್ನಾಡಿದರೂ ಅವನ್ನು ಸಹಿಸುವ ಶಕ್ತಿಯು ನನ್ನಲ್ಲಿದೆ ಇಷ್ಟು ಹೊತ್ತಿನ ತನಕ ಅತಿಥಿಯಾಗಿ ಬಂದ ನಿನ್ನೊಡನೆ ಸ್ನೇಹದಿಂದ ಮಾತುಕಥೆಗಳನ್ನಾಡಿದ ನಿನ್ನ ಮನವನ್ನು ನೋಯಿಸುವದು ನನ್ನ ಅಪೇಕ್ಷೆಯಿಲ್ಲ ಮೊದಲು ಅರಮನೆಯನ್ನು ಬಿಟ್ಟು ಹೊರಗೆ ನಡೆ ಆಮೇಲೆ ಏನು ಹೇಳಿ ಕೇಳುವದನ್ನೂ ನಡೆಸು. ಇಲ್ಲಿ ನಿಂತುಕೊಂಡು ಬಾಯಿಬಿಟ್ಟರೆ ಪರಿಣಾಮವಾಗದು

**ಕೃಷ್ಣ** :—ಸಾಮೋಪಚಾರದಿಂದ ನೀನು ಆ ಮಣಿಯನ್ನು ನಮ್ಮ ಸ್ವಾಧೀನ ಮಾಡದಿದ್ದರೆ ಉಪಾಯಗಾಣದೇ ನಮಗೆ ಕೊನೆಯ ಆಲೋಚನೆ ಮಾಡಬೇಕಾಗುವದು.

**ಜಾಂಬು** :—ಏನು ಯುದ್ಧವನ್ನು ಮಾಡಲಪೇಕ್ಷಿಸುವಿಯಾ ?

**ಕೃಷ್ಣ** :—ಅಹುದು.

**ಜಾಂಬು**: – ಅಗತ್ಯವಾಗಿ ನೀನು ಯುದ್ಧದಲ್ಲಿ ಜೈಸಿದಿಯಾದರೆ ಅಗತ್ಯವಾಗಿ ಆ ಮಣಿಯನ್ನು ಕೊಟ್ಟುಬಿಡುವೆನು.

**ಕೃಷ್ಣ:**— ಯುದ್ಧದಲ್ಲಿ ನಿನ್ನನ್ನು ಜೈಸಿದ ಮೇಲೆ ನೀನು ಕೊಡುವದೇಕೆ ಅದು ತಾನಾಗಿಯೇ ನರ್ತನ ಮಾಡುತ್ತ ಬರುವದು ಏನು? ಯುದ್ಧವು ನಿಶ್ಚಿತವಾಯಿತೇ?

**ಜಾಂಬು:**—ಇನ್ನೂ ನಿನಗೆ ಸಂದೇಹವಿರುವದೇ?

**ವಿಜಯ:**—ನಿಮ್ಮಿಬ್ಬರಿಗೂ ಹುಚ್ಚು ಹಿಡಿದಿದೆ. ಅಯ್ಯಾ ಜಾಂಬುವಂತ ರಾಜನೇ! ಯುದ್ಧ ಪ್ರಸಕ್ತಿಯು ಬೇಡ.

**ಜಾಂಬು:**—ಹಾಗೆ ನಿನ್ನ ಮಿತ್ರನಿಗೆ ಹೇಳು.

**ವಿಜಯ:**— ನಿಮ್ಮುಭಯತರಿಗೂ ಹೇಳುತ್ತಿದ್ದೇನೆ. "ಯುದ್ಧ ಪ್ರಸಕ್ತಿಯು ಬೇಡ" ಸುಮ್ಮನೆ ಆ ಮಣಿಯನ್ನು ಕೊಟ್ಟುಬಿಡು.

**ಕೃಷ್ಣ:**—ವಿಜಯಾ! ನೀನು ಸುಮ್ಮನಿರು. ಏನಯ್ಯಾ ಯುದ್ಧವಾಗ ಬೇಕೇ?

**ಜಾಂಬು:**—ನಿನಗೆ ಬೇಡವಾದರೆ ಬಿಡು ಮತ್ತು ಆ ಮಣಿಯ ಹವ್ಯಾಸವನ್ನು ಬಿಟ್ಟು ಸುಮ್ಮನೆ ದ್ವಾರಕೆಗೆ ನಡೆ.

**ಕೃಷ್ಣ:**— ಹಾಗಾದರೆ ಸೂರ್ಯೋದಯಕ್ಕೆ ಸರಿಯಾಗಿ ಯುದ್ಧಕ್ಕೆ ಸಿದ್ಧನಿರು.

**ಜಾಂಬು:**—ಸಿದ್ಧನಿದ್ದೇನೆ. ಹೋಗಿ ಪಾರುಪತ್ಯಗಾರನೇ ಅತಿಥಿಗಳಿಗೇನೇನುಬೇಕೋ ಅವುಗಳನ್ನೊದಗಿಸಿಕೊಡು. ಮತ್ತು ಭೋಜನಾದಿಗಳ ಏರ್ಪಾಡು ಸರಿಯಾಗಿ ಮಾಡು ಅಯ್ಯಾ ದ್ವಾರಕಾನಿವಾಸಿಯೇ! ಈ ರಾತ್ರಿ ನಮ್ಮರಮನೆಯಲ್ಲಿಯೇ ಇದ್ದು ನಮ್ಮ ಉಪಚಾರವನ್ನು ಹೊಂದ ಬಹುದು ಸೂರ್ಯಾಸ್ತವಾದ ನಂತರದಲ್ಲಿ ವಿರುದ್ಧಾಚರಣೆಗೆ ಎಡೆಯಲ್ಲಿದೇ?

**ಕೃಷ್ಣ:**—ಆ ಧರ್ಮಸಿಂಧುವನ್ನು ನಾನು ಬಲ್ಲೆನು.

**ಜಾಂಬು:**—ಹಾಗಾದರೆ ಪಾರುಪತ್ಯಗಾರರೇ ॥ ಪದ ॥

ಕೇದಾರ — ತಾಳ — ಝಂಪಾ

॥ **ಪದ** ॥ ಉಪಚರಿಸು ಇವರನ್ನು । ವಿಪುಲರುಚಿಕರಪಾದ ।
ಸುಫಲಗಳನಿತ್ತು ಮೇಲ್ । ಗೋದುಗ್ಧವನ್ನು ॥ ಪಲ್ಲ ॥
ಮಲಗಿ ನಿದ್ರಿಸಲಿವರಿಗನುಕೂಲಿಸೈ ತಲ್ಪ ।
ಚಲುವಾದ ಚಂದ್ರಶಾಲೆಯೊಳು ಜಾಗ್ರತದೇ ॥ ೧ ॥

**ಪಾರುಪತ್ಯಗಾರ**:—ಮಹಾಸ್ವಾಮೀ! ಹೀಗೆ ನಡೆಯಬೇಕು. (ಹೋಗುವರು)

**ಜಾಂಬು**:— (ಅವರು ಹೋಗುವದನ್ನು ನೋಡುತ್ತ) ಏನು? ಯುದ್ಧದಲ್ಲಿ ನನ್ನನ್ನು ಸೋಲಿಸಿ ಈ ದ್ವಾರಕೆಯ ಕರವು ನನ್ನಿಂದ ಆ ಮಣಿಯನ್ನು ಕೊಳ್ಳುವದೇ? ಬೆಳಿಗ್ಗೆ ತಾನೇ ಅದರ ನಿರ್ಣಯವಾಗುವದು (ರೋಹಿಣಿಯು ಬರುವಳು) ಏನೇ ರೋಹಿಣೀ ಕುಮಾರಿಯಾದ ಜಾಂಬುವತೀ ಎಲ್ಲಿ?

**ರೋಹಿಣಿ**:—ಅವರು ಕಾಲಿಕಾ ಮಾತೆಯ ಮಂದಿರದಲ್ಲಿರುವರು.

**ಜಾಂಬು**:—ನಡೆ ಹಾಗಾದರತ್ತವೇ ಹೋಗುವಾ? (ಹೋಗುವರು)

(ಪ್ರವೇಶ ಅರಮನೆಯ ಒಂದು ಭಾಗ)

**ವಿಜಯ**:—ಕೃಷ್ಣಯ್ಯಾ! ಅಂತೂ ಬೆಳಿಗ್ಗೆ ಯುದ್ಧವು ನಿಶ್ಚಿತವಾಯಿತು.

**ಕೃಷ್ಣ**:—ನಿಸ್ಸಂದೇಹ.

**ಪಾರುಪತ್ಯ**:—ಮಹಾಸ್ವಾಮೀ ಪ್ರವಾಸಿಗಳಾಗಿಯೂ ಅದರಲ್ಲಿ ಏಕಾಂಗಿಗಳಾಗಿ ಬಂದ ತಾವು ಜಾಂಬುವಂತ ಮಹಾರಾಜರಿಗೆ ಯುದ್ಧದ ಆಮಂತ್ರಣವನ್ನು ಕೊಡಬಾರದಾಗಿತ್ತು.

**ವಿಜಯ**:—ಅಯ್ಯಾ! ನೋಡು ನೀನಾದರೂ ಹೇಳು.

**ಕೃಷ್ಣ**:—ಕೊಡಬಾರದಾಗಿತ್ತು ಕೊಟ್ಟುಬಿಟ್ಟೆನು. ಇನ್ನೇನು ಯುದ್ಧ ಮಾಡದೇ ವಿಧಿಯಿಲ್ಲವಲ್ಲಾ?

**ಪಾರುಪತ್ಯ**:—ಅಪ್ಪಣೆಯಾದರೆ ಯುದ್ಧ ಪ್ರಸಕ್ತಿಯನ್ನು ಈಗಾದರೂ ತಪ್ಪಿಸಲಿಕ್ಕೆ ಬರುವದು.

**ಕೃಷ್ಣ**:—ಯುದ್ಧವಿಲ್ಲದೇ ಜಾಂಬುವಂತ ರಾಜನು ಆ ಮಣಿಯನ್ನು ನಮಗೆ ಕೊಡುವನೇ?

**ಪಾರುಪತ್ಯ** :— ಆ ಮಣಿಯ ಹವ್ಯಾಸವನ್ನು ಬಿಟ್ಟುಬಿಡಿ ಅದರ ಮನೆ ಹಾಳಾಗಾ!

**ಕೃಷ್ಣ** :—ಅದನ್ನು ಬಿಡಲಿಕ್ಕೆ ಮಾರ್ಗವಿಲ್ಲ.

**ಪಾರುಪತ್ಯ** :—ಹಾಗಾದರೆ ಯುದ್ಧಮಾಡಿದ ಹೊರ್ತು ಗತಿಯಿಲ್ಲ. ಅಯ್ಯಾ ದ್ವಾರಕಾನಿವಾಸಿಯೇ! ನಮ್ಮ ಜಾಂಬುವಂತ ಮಹಾರಾಜರ ಪರಾಕ್ರಮವನ್ನು ನೀನಿನ್ನೂ ನೋಡಿಲ್ಲ.

**ಕೃಷ್ಣ** :—ನೋಡುವದಕ್ಕಾಗಿಯೇ ಬಂದಿದ್ದೇನೆ.

**ಪಾರುಪತ್ಯ** .—ಅಂತೇ ಹೀಗೆ ಯುದ್ಧವನ್ನಾಡಲಪೇಕ್ಷಿಸುವಿ? ಆದರೂ ನೋಡು ಬೆಳಗಾಗುವ ತನಕ ಯೋಚಿಸಲಿಕ್ಕೆ ಸಮಯವಿದೆ. ವೃಥಾ ದುರಾಗ್ರಹವನ್ನು ಹಿಡಿಯಬೇಡ, ಅಯ್ಯಾ! ನೀನಾದರೂ ನಿನ್ನ ಮಿತ್ರನಿಗೆ ನಾಲ್ಕು ಹಿತದ ಮಾತುಗಳನ್ನು ಹೇಳು.

**ವಿಜಯ** :—ಅಯ್ಯಾ! ಏನು ಮಾಡಲಿ? ನನ್ನ ಮಿತ್ರನು ನನಗೆ ಮೀರಿ ನಿಂತಿದ್ದಾನೆ.

**ಪಾರುಪತ್ಯ**:—ಹಾಗಾದರೇನು ಮಾಡುವದು? ನಡಿಯಿರಿ ಭೋಜನವನ್ನು ತೀರಿಸಿಕೊಳ್ಳುವಾ! ದೈವದಲ್ಲಿದ್ದದ್ದು ಯಾರಿಗೂ ತಪ್ಪುವದಿಲ್ಲ (ಹೋಗುವರು)

ಪ್ರವೇಶ (ಕಾಳಿಕಾಗುಡಿ) ಜಾಂಬುವತಿಯು ಕೀರ್ತನವನ್ನು ಮಾಡುತ್ತಿರುವಳು :—

**ಜಾಂಬುವತಿ** :—

ರಾಗ|| ಭೀಮಪಲಾಸ| ತಾಳ ತ್ರಿವಟ||

|| **ಪದ** || ಜಗದಘನಾ | ಶನವಾಗೈವಾ | ಭೋ ಗಿರಿ ಜಾತೆಯಾಳೀ ||
ತೋರಿದಯಾ || ಪಲ್ಲ ||
ಮಾತೆ ನಿನ್ನನೂ | ನೆರೆನಂಬಿರುವೇ | ಶಾಂತನಾಗಲೆನಗೆ,
ಯದುನಾಯಕನು || ೧ || ಕೃತ್ತಿಕೆಯನ್ನು ನೋಡಿ

ಏನೇ ಕೃತ್ತಿಕೆ ಯಾವಾಗ್ಗೆ ಬಂದೆಯೇ?

**ಕೃತ್ತಿಕೆ** :—ಅಮ್ಮನವರೇ! ನಾನು ಆಗಲೇ ಬಂದುಬಿಟ್ಟಿದ್ದೆನು. ಕಾಳಿಕಾ

ಮಾತಿಯ ಸಂಕೀರ್ತನೆಯಲ್ಲಿ ತೊಡಗಿದ ತಮ್ಮನ್ನು ಮಾತಾಡಿಸಲಾಗ ದೆಂದು ಸುಮ್ಮನೇ ನಿಂತುಕೊಂಡಿದ್ದೆನು.

**ಜಾಂಬುವತಿ**:—ಆ ದ್ವಾರಕೆಯಿಂದ ಬಂದ ಪ್ರವಾಸಿಗಳೆಲ್ಲಿ ? ಅವರು ತಾತನೊಡನೆ ಏನೇನು ಮಾತುಗಳನ್ನಾಡುತ್ತಿದ್ದರು ? ಅವರಿವರ ಸಂಭಾ ಷಣೆಯಲ್ಲಿ ದ್ವಾರಕೆಯ ಶ್ರೀಕೃಷ್ಣ ಮಹಾರಾಜರ ಪ್ರಸ್ತಾಪವೇನಾದರೂ ಹೊರಟಿತ್ತೆ ?

**ಕೃತ್ತಿಕೆ**:—ದೇವಿಯವರೇ! ತಾವು ದ್ವಾರಕೆಯ ಶ್ರೀಕೃಷ್ಣ ಮಹಾರಾಜರ ಹಂಬಲವನ್ನು ಹಿಡಿದದ್ದೇನೂ ಸರಿಯಾಗಲಿಲ್ಲ.

**ಜಾಂಬು**:—ನಿನ್ನ ಬುದ್ಧಿವಾದದಿಂದ ನನಗೇನೂ ಪ್ರಯೋಜನವಿಲ್ಲ. ನಾನೊಂದು ಕೇಳಿದರೆ ತಾನೊಂದು ಹೇಳುತ್ತಿರುವಳು.

**ಕೃತ್ತಿಕೆ**:—ಅದೋ! ಅಮ್ಮನವರೇ! ರೋಹಿಣಿಯೊಡನೆ ಹಿರೇ ದೊರೆ ಗಳು ಬರುತ್ತಲಿದ್ದಾರೆ. ಅವರೇ ಸಕಲ ಸಂಗತಿಗಳನ್ನೂ ಹೇಳುವರು. ಕೊಂಚ ನಿಧಾನಿಸಿ.

**ರಾಜ**:—ಮಗೂ! ನೋಡಿದಿಯಾ? ದ್ವಾರಕಾನಿವಾಸಿಗಳ ಗುಣಗಳು ಹೇಗಿವೆ ?

**ಜಾಂಬುವತಿ**:—ತಾತಾ ಏನಾಯಿತು ?

**ರಾಜ**:—ಅಲ್ಲಾ.........ಪ್ರವಾಸಿಗಳು ಪಾಪ ಅತಿಥಿಗಳಾಗಿ ನಮ್ಮ ಲ್ಲಿಗೆ ಬಂದಿದ್ದಾರೆ ತಕ್ಕ ಆದರೋಪಚಾರಗಳನ್ನು ಮಾಡಬೇಕೆಂದು, ಹಿತೋಕ್ತಿಗಳನ್ನಾಡುತ್ತಲೂ, ನಮ್ಮ ಅರಮನೆಯ ಭಾಗವನ್ನೆಲ್ಲಾ ತೋರಿಸುತ್ತಲೂ, ದೇವರ ಮನೆಯಲ್ಲಿ ಕರದೊಯ್ದೆನು. ಅವರು ಅಲ್ಲಿ ರುವ ದೇವತಾ ವಿಗ್ರಹಗಳನ್ನೆಲ್ಲಾ ನೋಡುತ್ತ ಕೊನೆಗೆ ಆ ಮಣಿಯ ರೂಪವಾದ ಲಕ್ಷ್ಮಿಯನ್ನು ನೋಡಿದರು, ಸಾಯಂಕಾಲವಾದ್ದರಿಂದ ಆರುತಿಯಾಗುವಷ್ಟರಲ್ಲಿ ಲಕ್ಷ್ಮಿಯು ನಿತ್ಯ ಕ್ರಮದಂತೆ ಸುವರ್ಣ ಪ್ರಸಾ ದವನ್ನು ದಯಪಾಲಿಸಿದಳು. ಅದನ್ನು ನೋಡಿ ಆ ಬಂದವರ ಬಾಯಿಗೆ ನೀರು ಬಿಟ್ಟಿತು.

**ಜಾಂಬುವತಿ** :—ಸರಿ. ಶಿರಿಯನ್ನು ನೋಡಿದರೆ ಯಾರ ಬಾಯಿಗಾದರೂ ನೀರು ಬರುವದು ಸ್ವಾಭಾವಿಕವೇ! ಇರಲಿ ಆಮೇಲೆ?

**ರಾಜ** :—ಮುಂದೆ ಕೇಳು. ಹಾಗೆ ಬಾಯಿಗೆ ನೀರು ಬರುತ್ತಲೇ ಆ ಮಣಿಯನ್ನಪಹರಿಸುವದಕ್ಕಾಗಿ ಒಂದು ಸಂಗತಿಯನ್ನು ಹೇಳಿದರು.

**ಜಾಂಬುವತಿ** :—ಅದಾವ ಸಂಗತಿಯು?

**ರಾಜ** :—ಆ ಮಣಿಯನ್ನು ತಮ್ಮ ದೇಶದ ಯಾವನೋ ಒಬ್ಬ ಸರ್ದಾರನು ಸೂರ್ಯೋಪಾಸನೆಯಿಂದ ಸಂಪಾದಿಸಿದನೆಂತಲೂ, ಅದನ್ನವನು ಕೊರಳಲ್ಲಿ ಧರಿಸಿ ಮೃಗಯಾರ್ಥ ವನಕ್ಕೆ ಹೋದವನು ಮಾಯವಾಗಿದ್ದಾನೆಂತಲೂ,

**ಜಾಂಬುವತಿ**:—ಸರಿ ಮೃಗಯಾರ್ಥ ಹೊರಟ ಆ ಸರ್ದಾರನನ್ನು ಶಾರ್ದೂಲವು ಕೊಂದಿತು. ಆ ಶಾರ್ದೂಲವನ್ನು ನೀನು ಸಂಹರಿಸಿದೆ. ಅದೇ ಸ್ಥಳದಲ್ಲಿ ಅನಾಯಾಸವಾಗಿ ಆ ಮಣಿಯು ಸಿಕ್ಕಿ —

**ರಾಜ** :—ಸಂದರ್ಭವೇನೋ ಸರಿಯೆ ಆದರೆ ತಮ್ಮ ದ್ವಾರಕೆಯವನಿಗೆ ಸಮ್ಮಂಧಪಟ್ಟ ಆ ಮಣಿಯನ್ನು ನಾನವರಿಗೆ ತಿರಿಗಿ ಕೊಡಬೇಕಂತೆ.

**ಜಾಂಬುವತಿ** :—ತಾವೇನವನ್ನು ಬಲಾತ್ಕಾರವಾಗಿಯೂ, ಅನ್ಯಾಯವಾಗಿಯೂ, ಅಪಹರಿಸಿಕೊಂಡು ಬಂದಿಲ್ಲವಲ್ಲಾ?

**ರಾಜ**:—ಹಾಗಿದ್ದರೂ ನಾನದನ್ನವರಿಗೆ ಕೊಡಲೇ ಬೇಕಂತೆ. ಸಾಮೋಪಚಾರದಿಂದ ಕೊಡದಿದ್ದರೆ ಯುದ್ಧದಲ್ಲಿ ನನ್ನನ್ನು ಜೈಸಿ ಆ ಮಣಿಯನ್ನು ಕೊಂಡುಹೋಗುವರಂತೆ!

**ಜಾಂಬುವತಿ** :—ಹೀಗೆ ಆ ಪ್ರವಾಸಿಗಳು ಹೇಳುತ್ತಿರುವರೇ?

**ರಾಜ** :—ಅಹುದು ನೋಡಿದಿಯಾ? ರಕ್ಕಸರಂಥ ಆ + ಶಬುರಕರ ಅರಸನನ್ನು ವರಿಸುವ ನಿನ್ನ ವಿಚಾರವು ಸರಿಯಾದದ್ದೇ?

**ಜಾಂಬುವತಿ** :—ತಾತಾ! ಆ ಸಂದರ್ಭವನ್ನೆತ್ತಬೇಡ; ಅನಾಯಾಸವಾಗಿ ಮಣಿಯ ನೆವನವಾಗಿದೆ. ಈ ಸಮಯಕ್ಕೆ ಜಾಂಬುವಂತ ದೇವರ ರಾಜ್ಯದವರೂ ಮತ್ತು ಅವರ ರಾಜನೂ ತಮ್ಮಂತಹ ಮನುಷ

ನೆಂದೂ, ಅತ್ಯದ್ಭುತ ಬಲಶಾಲಿಯೆಂದೂ, ಆ ದ್ವಾರಕೆಯವರಿಗೂ, ಆ ನಿಮಿತ್ತವಾಗಿ ಸಕಲ ಆರ್ಯ ಜನಾಂಗಕ್ಕೂ, ತೋರಿಸುವ ಸುಸಂಧಿಯು ಬಂದಿದೆ.

**ರಾಜ** :—ಅದನ್ನು ನಾನಾಗಲೇ ತಿಳಿದುಕೊಂಡಿದ್ದೇನೆ.

**ಜಾಂಬುವತಿ** :—ಸರಿ ಹಾಗಾದರೆ ನಾಳಿಗೆ ತಾನೆ ಆ ದ್ವಾರಕಾನಿವಾಸಿಯು ನಿಮ್ಮೊಡನೆ ಹೋರಾಡಲಿಕ್ಕೆ ಸಿದ್ಧನಾಗಿರುವನು?

**ರಾಜ** :—ಅಹುದು ಸೂರ್ಯೋದಯಕ್ಕೆ ಸರಿಯಾಗಿ ಯುದ್ಧವು ಪ್ರಾರಂಭವಾಗುವದು.

**ಜಾಂಬುವತಿ** :—ಆ ಯುದ್ಧ ನೋಟವು ನಮಗೆ ನೋಡಲಿಕ್ಕೆ ಸಿಕ್ಕೀತೇ?

**ರಾಜ** :—ಅದರ ಏರ್ಪಾಡು ಮಾಡುವದಕ್ಕೆ ಪಾರುಪತ್ಯಗಾರನಿಗೆ ಹೇಳುವೆನು. ಅಸ್ತು ನಡೆ ಭೋಜನಾದಿಗಳನ್ನು ತೀರಿಸಿಕೊಳ್ಳುವಾ?
(ಹೋಗುವರು)

**— : ೩ನೇ ಅಂಕ ಸಮಾಪ್ತಿ :—**

## — ೪ನೇ ಅಂಕಃ —



(ಪ್ರವೇಶ)

**ಪಾರುಪತ್ಯಗಾರ:** —ಅರುಣೋದಯವಾಯಿತು ; ಸೂರ್ಯನು ಉದಯಿಸುತ್ತಲೇ ಜಾಂಬುವಂತ ಮಹಾರಾಜರಲ್ಲಿಯೂ, ಮತ್ತು ಆ ದ್ವಾರಕಾ ನಿವಾಸಿಯಲ್ಲಿಯೂ, ಕದನವು ಪ್ರಾರಂಭವಾಗುವದು. ಕದನವಲ್ಲಿ ಗೆಲವು ಯಾರ ಪಾಲಿಗಿರಬಹುದು ? ಒಂದು ಸಮಯ ಆ ದ್ವಾರಕಾನಿವಾಸಿಯೇ ಗೆದ್ದರೇ ! ನಮ್ಮರಮನೆಯ ಲಕ್ಷ್ಮಿಯಾದ ಶಿರಿಮಣಿಯು ಎರವಾಗಿ ಹೋಗುವದು. ಆ ಮಣಿಯು ಹೋದನಂತರದಲ್ಲಿ ನಮ್ಮ ಪಾಲಿಗೆ ಮೊದಲಿನ ಅವಸ್ಥೆಯೇ !

“ ಕೃತ್ತಿಕಾ, ರೋಹಿಣಿ, ಜಾಂಬುವತಿಯರು ಬರುವರು ”

**ರೋಹಿಣಿ:**—ಏನು ಪಾರುಪತ್ಯಗಾರನೇ ಅಮ್ಮನವರ ಸಲುವಾಗಿ ಏರ್ಪಟ್ಟ ಸ್ಥಳವೆಲ್ಲಿದೇ ?

**ಪಾರುಪತ್ಯ:**—ನಮ್ಮ ದೈವದಲ್ಲೇನಿರುವದೋ ಏನೊ ? ಚಿನ್ನದ ರಾಶಿಯ ಮೇಲೆಯೇ ಕುಳಿತುಬಿಟ್ಟಿದ್ದೆವು.

**ಜಾಂಬುವತಿ:**—ರೋಹಿಣಿ ! ನಿನ್ನ ಮಾತಿನ ಕಡೆಗೆ ಅವನ ಚಿತ್ತವೇ ಇಲ್ಲ. ಅವು ಎತ್ತೋ ದೂರ ಹೋಗಿ ಬಿಟ್ಟಿದೆ. ಬಹೂ ಗೂಢಾಲೋಚನೆಯಲ್ಲಿ ಮಗ್ನನಾಗಿ ಬಿಟ್ಟಿದ್ದಾನೆ.

**ರೋಹಿಣಿ:**—ಅಯ್ಯಾ ! ಪಾರುಪತ್ಯಗಾರನೇ !

**ಪಾರುಪತ್ಯ:**—ಏ. ಏ. ಏ. ಹಾಗೇನಾಗಲಿಕ್ಕಿಲ್ಲ. ನಮ್ಮ ಜಾಂಬುವಂತ ಮಹಾರಾಜರು ಗೆಲಿಯುವದೇ ಖಂಡಿತ.

**ಇಬ್ಬರೂ:**—ನಮ್ಮದಾದರೂ ಅದೇ ಅಭಿಪ್ರಾಯವು.

**ಪಾರುಪತ್ಯ:**—ಬನ್ನಿ ಬನ್ನಿ ಅಮ್ಮನವರೇ ! ತಮ್ಮ ಸಲುವಾಗಿ ಬಹು ದಿವ್ಯವಾದ ಸ್ಥಳವನ್ನೇರ್ಪಡಿಸಿದ್ದೇನೆ ಯುದ್ಧರಂಗವು ಅಂಗೈಯ್ಯಲ್ಲಿಯೇ ಕಾಣುವದು.

**ಜಾಂಬುವತಿ**:—ಚೆನ್ನಾಯಿತು. ನಡೆ. ಅತ್ತೆಯವೇ ನಮ್ಮನ್ನು ಕರೆದು ಕೊಂಡು.

**ಪಾರುಪತ್ಯ**:—ಅಮ್ಮನವರೇ! ಆ ದ್ವಾರಕಾ ನಿವಾಸಿಯು ಎಂತಹ ಎದೆಗಾರ ನೋಡಿ! ತಾನು ಏಕಾಂಗಿಯಾಗಿ ನಮ್ಮ ರಾಜ್ಯದಲ್ಲಿ ಬಂದು ಮಹಾ ಬಲಶಾಲಿಗಳಾದ ಜಾಂಬುವಂತ ಮಹಾರಾಜರೊಡನೆ ದ್ವಂದ್ವ ಮಾಡಲು ಸಿದ್ಧನಾಗಿದ್ದಾನೆ.

**ಜಾಂಬುವತಿ**:—ಅದಕ್ಕಾಗಿಯೇ ಅಪೇಕ್ಷಿಸಪಟ್ಟು ಈ ಯುದ್ಧವನ್ನು ನೋಡಲಿಕ್ಕೆ ಬಂದಿದ್ದೇನೆ.

**ರೋಹಿಣಿ**:—ವೀರಕುಮಾರಿಯರಂತೇ ಯುದ್ಧದಂತಹ ಭೀಕರ ನೋಟವನ್ನು ನೋಡಲಿಕ್ಕೆ ಸಿದ್ಧರಾಗಿರುವಿರಿ. ಸಾಮಾನ್ಯ ಮಾನಿನಿಯರಿಗೆ ಈ ಧೈರ್ಯವೆತ್ತಿಂದ ಬರಬೇಕು? ನನ್ನದೇ ಸ್ಥಿತಿಯನ್ನು ನೋಡಿ! ನಿಮ್ಮ ಧೈರ್ಯದಿಂದಲೇ ಇಲ್ಲಿಗೆ ಬಂದಿದ್ದೇನೆ. ಆದರೂ ಆವೇಶಪೂರ್ಣ ವೀರರ ಯುದ್ಧವನ್ನು ನೋಡುವಾಗ್ಗೆ ನನ್ನದೇನು ಗತಿಯಾಗುವದೋ ಕಾಣೆ!

**ಪಾರುಪತ್ಯ**:—ಅಮ್ಮನವರೇ! ಅತ್ತ ನೋಡಿ. ಸಮರ ವೇಷದಲ್ಲಿ ಜಾಂಬುವಂತ ದೊರೆಗಳು ಬರುತ್ತಲಿದ್ದಾರೆ. ಅಮ್ಮನವರೇ! ಮಹಾರಾಜರು ಈಗಿನ ಸಮಯದಲ್ಲಿ ಹೇಗೆ ಕಾಣುತ್ತಲಿರುವರು?

**ಜಾಂಬುವತಿ**:—ಅಹಹ, ಕಾಲಭೈರವನಂತೆ ಕಾಣುತ್ತಲಿದ್ದಾನೆ.

ರಾಗ—ಬಿಹಾಗ॥ ತಾಳ ತ್ರಿವಟ॥

1 **ಪದ** ॥ ಆಗಮಿಸುತಿರುವ ಮಹಾದೇವ । ಖಳಜನಕುಲವಿನಾಶ ॥
ಗೈಸುತಿರ ರಣಿಯೊಳ್ । ರಭಸದಲೀ ॥ ಪ ॥
ಘನಸಮರ ಧೀರಾ । ವರವೀರಾ । ಬಲಪಾರಾ । ರಿಪುಸಂಹಾರಾ ।
ಕಾಲಭೈರವನಾಗಿ ತೋರ್ಪ ॥ ೧ ॥

**ರೋಹಿಣಿ**:—ನಿಜವಾದದ್ದನ್ನೇ ಹೇಳಿದಿರಿ. ಕೊರಳಿನಲ್ಲಿ ರುಂಡಮಾಲೆಯೊಂದಿರುತ್ತಿದ್ದರೆ ನಿಶ್ಚಯವಾಗಿ ಅವರು ಕಾಲಭೈರವರೇ!

**ರಾಜ**:—(ಬಂದು) ಮಗೂ! ಎಷ್ಟು ಮುಂಚಿತವಾಗಿ ಬಂದಿರುವೆ? ಮತ್ತು

ಯುದ್ಧವನ್ನು ನೋಡುವದಕ್ಕೆ ಎಷ್ಟು ಆತುರಳಾಗಿರುವೆ? ಅವರೆ ಜೋಕೆ ಉಗ್ರವಾದ ಯುದ್ಧವು ನಡೆದು, ಯೋದ್ಧಾಪುರುಷರ ರಕ್ತಮಯವಾದ ರೂಪವನ್ನು ನೋಡಿ ಭಯಪಡಲಾಗದು.

**ಜಾಂಬುವತಿ**:—ತಂದೇ ನಿಮ್ಮ ತನುಜಾತೆಯಾದ ನಾನು ಭಯಪಡ ತಕ್ಕವಳೇ ನೀವು ಯಶಸ್ವಿಗಳಾದರಂತೂ ಸರಿಯೇ, ಹಾಘಾಗದಿದ್ದರೆ ಆ ಪುರುಷನು ಮಣಿಯ ಸಲುವಾಗಿ ನನ್ನಗೂಡಾವರೂ ಹೋರಾಡಿ ಜೈಸಲಿ.

**ರೋಹಿಣಿ**:—ಏನು ಯುದ್ಧಮಾಡುವಿರಾ?

**ಜಾಂಬುವತಿ**:—ಏಕೆ ಮಾಡಬಾರದು?

**ಪಾರುಪತ್ಯ**:—ತಾಯಿಯವರೇ! ಸ್ತ್ರೀಯರು ಯುದ್ಧಮಾಡಿದ್ದನ್ನು ನಾನಿದುವರಿಗೂ ಕೇಳಿಲ್ಲ.

**ಜಾಂಬುವತಿ**:—ಸಮಯ ಬಂದರೆ ನೋಡುವಿರಂತೆ. ನಮ್ಮ ದೇಶದ ಸಿರಿಯನ್ನು ಪರರು ಹರಣಮಾಡಿಕೊಂಡು ಹೋಗುವಾಗ್ಗೆ ನಾವು ಸುಮ್ಮನೇ ಕುಳಿತುಕೊಳ್ಳುವದು ಯೋಗ್ಯವೇ? ನಮಗಾದರೂ ಕೈಕಾಲಗಳಿಲ್ಲವೇ?

**ರಾಜ**:—ಭಾಪು, ಭಾಪು. ಕುಮಾರಿಯೇ! ಸ್ವಾಭಿಮಾನ ಶೂನ್ಯರಾಗಿಯೂ ಮತ್ತು ಹೇಡಿಗಳಾಗಿರುವ ಹನ್ನೆರಡು ಗಂಡುಮಕ್ಕಳಿರುವದಕ್ಕಿಂತಲೂ ನಿನ್ನಂತಹ ಹೆಣ್ಣುಮಗಳೇ ಲೇಸು. ಶ್ರೀ ಶಂಭುವಿನ ದಯದಿಂದ ಅಂಥ ಪ್ರಸಂಗವೇನೂ ಬರಲಾರದು. ಇರಲಿ ಪಾರುಪತ್ಯಗಾರರೇ! ಪ್ರತಿಪಕ್ಷಿಯನ್ನು ಕರೆತರುವದಕ್ಕಾಗಿ ಯಾರನ್ನಾದರೂ ಕಳಿಸಿರುವಿರಾ?

**ಪಾರುಪತ್ಯ**:—ಈ ಮುಂಚಿತವಾಗಿಯೇ ಕಳಿಸಿದ್ದೇನೆ ಬುದ್ಧಿ!

**ರಾಜ**:—ಮಗೂ ನೀನು ನಿನ್ನ ಸ್ಥಳದಲ್ಲಿ ಕುಳಿತುಕೋ ನಡೆ.

**ಪಾರುಪತ್ಯ**:—ಅದೋ ಮಹಾಸ್ವಾಮೀ! ಪ್ರತಿಪಕ್ಷಿಯಾದ ದ್ವಾರಕಾನಿವಾಸಿಯು ತನ್ನ ಮಿತ್ರನೊಡನೆ ಹೇಗೆ ಉಬ್ಬಿನಲ್ಲಿ ಬರುತ್ತಿರುವನು.

**ರಾಜ**:—ಅವನು ಸಾಮಾನ್ಯ ಪುರುಷನಲ್ಲ. ಸಾಮಾನ್ಯಮಾನವನಾಗಿದ್ದರೆ ಇಂತಹ ಸಾಹಸಕ್ಕೀಡಾಗುತ್ತಿದ್ದನೇ?

|| ವೃತ್ತ ||

|| **ಪದ** || ನೋಡುವನು ನಡೆದು ಬರುತಿಹ ಸೊಬಗನೂ || ಪಲ್ಲವಿ ||
ನೋಡಬಣ್ಣಾವ ಮನುಜಗಜದಂತೆ ತಾನೂ || ಅ || ಪಲ್ಲ ||
ಎದೆಯುಬ್ಬಿಸಿಹ ಬಾಹುಗಳ ಬೀಸುತಿಹ | ಸಮರಕುದಿ |
ಇಲ್ಲದಂತೆ ಸ್ವಯಮಿತ್ರನೊಡನೇ | ಮುದದಿಂದ ಮಾತುಗಳ |
ಹೇಳುತಾ ನಡೆದಿರುವ | ಮದುವಣಿಗನಂತೆ ಸೋಜಿಗವಲ್ಲವೇನೈ || ೧ ||
ಸುರಿತವನು ಇರಬಹುದು ಯುದ್ಧಕಲೆಯಲ್ಲಿ |
ಪನು | ಪರದೇಶದಲ್ಲಿ ಏಕಾಂಗಿಯಾಗಿ | ಚರಿಸುವಾಸ ||
ಮಯದೇ | ಈತೆರದಿ ಸಮರಕೇ | ಕರೆಯುವನು ಸಾಮಾನ್ಯ |
ನರನಾಗಬಹುದೇ || ೨ ||

**ಜಾಂಬುವತಿ** :—ಮಿತ್ರೆ! ರೋಹಿಣಿ! ಅದೋ ಅವನೇ ದ್ವಾರಕಾನಿವಾಸಿಯಲ್ಲವೇ?

**ರೋಹಿಣಿ** :– ಅಹುದಮ್ಮ ನವರೇ!

**ಜಾಂಬುವತಿ** :—ನಿಶ್ಚಯವಾಗಿ ಇವರೇ ದ್ವಾರಕೆಯ ಶ್ರೀಕೃಷ್ಣರಾಜರು.

**ರೋಹಿಣಿ** :—ಏನು? ಇವರು ಶ್ರೀಕೃಷ್ಣ ಮಹಾರಾಜರೇ!

**ಜಾಂಬುವತಿ**:—ಅಹುದಹುದು ಇವರೇ, ಆ ದಿವ್ಯ ಲಕ್ಷಣಗಳು ಶ್ರೀಕೃಷ್ಣರಾಜರಿಗಲ್ಲದೇ ಅನ್ಯರಿಗಿರಬಹುದೇ? ನಿಶ್ಚಯವಾಗಿ ಇವರೇ ನನ್ನ ಪ್ರಾಣನಾಥರು.

**ರೋಹಿಣಿ**:—ಹ. ಹ. ಹ. ಸ್ವಲ್ಪ ನಿದಾನಿಸಿ ಅಮ್ಮನವರೇ! ಹಾಗೆ ಮಡಕಬೇಡಿ. ದೇವಿಯವರೇ! ಒಮ್ಮೆಂದೊಮ್ಮೆ ಆ ಪುರುಷನನ್ನು ನೀವು ನಿಮ್ಮ ಪ್ರಾಣನಾಥನೆಂದು ಹೇಳಿದಿರಲ್ಲಾ ಇದು ಸರಿಯೇ? ಅವನು ಒಂದು ಸಮಯ ಶ್ರೀಕೃಷ್ಣರಾಜರಾಗದಿದ್ದರೇ?

**ಜಾಂಬುವತಿ**:—ಸಖಿ! ರೋಹಿಣಿ! ಅದು ಸಾಧ್ಯವಿಲ್ಲ. ನಿಶ್ಚಯವಾಗಿಯೂ ಇವರೇ! ಶ್ರೀಕೃಷ್ಣ ಮಹಾರಾಜರು. ಎಲೆ! ನನ್ನ ನಿರ್ಮಲಾಂತಃಕರಣವು ನನ್ನನೆಂದೂ ವಂಚಿಸಲಾರದು.

**ರೋಹಿಣಿ**:—ಇದೇನು ಆಶ್ಚರ್ಯವು? ತಾವೆಂದೂ ಅವರ ಭಾವಚಿತ್ರವನ್ನು ಸಹ ನೋಡಲಿಲ್ಲ. ಹೀಗಿರಲು ಅವರೇ ಇವರೆಂದು ಹೇಳುವಿ

ರಲ್ಲಾ? ಇದೊಳ್ಳೇ ಆಶ್ಚರ್ಯವು—ನೋಡಿ! ತಮ್ಮ ಕಲ್ಪನೆಯು ಸುಳ್ಳಾದರೇ!

**ಜಾಂಬುವತಿ**:—ಛಿ. ಅದು ಸಾಧ್ಯವಿಲ್ಲ. ಹಾಗೆ ನನ್ನ ಮನವು ನನ್ನನ್ನು ವಂಚಿಸಿದ್ದಾದರೆ ಅದಕ್ಕೆ ಆಶ್ರಯವನ್ನು ಕೊಟ್ಟ ಈ ನನ್ನ ಹೃದಯವನ್ನು ಒಡೆದುಬಿಟ್ಟೇನು. ಇರಲಿ; ಮಿಟ್ಟು ಮಿಸಗದಂತೆ ಸ್ವಂಪ್ನವನ್ನು ನೋಡುವಾ ಸದ್ಯಕ್ಕೆ ಆ ಪ್ರಸ್ತಾಪವೇ ಬೇಡ.

**ಕೃಷ್ಣ**:— (ಪ್ರವೇಶಿಸಿ) ವಿಜಯನೇ! ಯಾವ ಕಾಲಕ್ಕೂ ಆಶ್ಚರ್ಯಪಡಬೇಡ; ಖಂಡಿತವಾಗಿ ದ್ವಂದ್ವದಲ್ಲಿ ನಾನೇ ಜಯಶಾಲಿಯಾಗುವೆನು.

**ವಿಜಯ**:—ಆಗಬಹುದು. ಆದರೇ ಸತ್ರಾಜಿತನ ಹಿತಕ್ಕಾಗಿ ನೀನು ತೊಂದರೆಯಲ್ಲಿ ಬಿದ್ದದ್ದು ಮಾತ್ರ ಕೇವಲ ಪ್ರಮಾದವು ಆಗಲಿ ನಡೆಮಾಡುವದೇನು?

**ಕೃಷ್ಣ**:—ಸುಮ್ಮನಿರು. ವಿಜಯಾ! ಅದೋ ನೋಡಿದಿಯಾ? ಜಾಂಬುವಂತನು ಯುದ್ಧಕ್ಕೆ ಸಿದ್ಧನಾಗಿ ಹೇಗೆ ನನ್ನ ದಾರಿಯನ್ನೇ ನೋಡುತ್ತ ನಿಂತಿರುವನು.

**ವಿಜಯ**:—ಅಬ್ಬಬ್ಬಾ! ಏನವನ ಭವ್ಯಾಕೃತಿಯೋ? ನಿನ್ನನ್ನು ನೋಡಿ ಅವನನ್ನು ನೋಡಿದರೆ ನನ್ನ ಮನಕ್ಕೇನೋ ಅನುಮಾನವಾಗುವದು.

**ಕೃಷ್ಣ**:—ಅದೇನು ಅನುಮಾನ?

**ವಿಜಯ**:—"ಅಜಗಜನ್ಯಾಯಾ"

**ಕೃಷ್ಣ**:—ಸಾಕು ತಮ್ಮ ಪಾಂಡಿತ್ಯವು.

**ರಾಜ**:—ಬನ್ನಿ ಬನ್ನಿ. ದ್ವಾರಕಾನಿವಾಸಿಗಳೇ! ನಿಮ್ಮೊಡನೆ ಹೋರಾಡುವದಕ್ಕೆ ನಾನು ಸಿದ್ಧನಿದ್ದೇನೆ.

**ವಿಜಯ**:—ಇದೇನು ಜಾಂಬುವಂತ ರಾಜರೇ "ನಿಮ್ಮೊಡನೆ ಹೋರಾಡುವದಕ್ಕೆ ಸಿದ್ಧನಿದ್ದೇನೆಂದು" ಹೇಳುವಿರಲ್ಲಾ?

**ರಾಜ**:—ಹಾಗೇತಕ್ಕೆ ಹೇಳಲಾಗದು? ನಿಜವಾಗಿಯೂ, "ನಿಮ್ಮೊಡನೆ ನಾನು ಹೋರಾಡುವದಕ್ಕೆ ಸಿದ್ಧನಿದ್ದೇನೆ"

**ವಿಜಯ** :—ಮಾತು ಬದಲಾಯಿತು ತಾವಿಷ್ಟು ಸುಳ್ಳಾಡುವಿರೆಂದು ನಾನೆಣಿಸಿದ್ದಿಲ್ಲಾ.

**ಕೃಷ್ಣ** :—ಅದೇನೊ? ಅವರೆಲ್ಲಿ ಸುಳ್ಳಾಡಿದರೊ? ನಮ್ಮೊಡನೆ ಅವರ ಯುದ್ಧವಿಲ್ಲವೇ?

**ವಿಜಯ** :—ಏನು ಹಾಗೆ ಹೇಳಿದರೆ ನಮ್ಮೊಡನೆ ಅವರ ಯುದ್ಧವಿರುವದೆ!

**ಇಬ್ಬರು** . ಅಹುದಹುದು.

**ವಿಜಯ** :—ಕೃಷ್ಣಯ್ಯಾ! ನಿನ್ನೊಡನೆ ಆತನ ಯುದ್ಧವಿದೆ. ನಮ್ಮೊಡನೆ "ನಿಮ್ಮೊಡನೆ" ಎಂದು ಹೇಳಿ ನನ್ನನ್ನು ಸೇರಿಸಿಕೊಳ್ಳುವದು ಬೇಡ ನಾನೇನು ಯುದ್ಧಮಾಡತಕ್ಕವನಲ್ಲ.

**ಕೃಷ್ಣ** :—ಓಹೋ ಜಾಂಬುವಂತ ರಾಜನೇ! ನಿನ್ನ ಬಹು ವಚನಪ್ರಯೋಗವು ಇವನನ್ನು ಭಯ ಪಡಿಸಿದೆ. ಎಲೋ ವಿಜಯಾ! ನಿನ್ನಿಂದ ಯುದ್ಧವನ್ನು ನೋಡುವದಾಗದಿದ್ದರೆ ಎಲ್ಲಿಯಾದರೂ ಮೊರೆಯಲ್ಲಿ ಅಡಗಿಕೊಂಡು ಕುಳಿತುಕೊ! ಆಗಲಿ ವನರಾಜನೇ! ಆಲಸ್ಯವೇಕೆ?

**ರಾಜ** :—ಇದೋ ನಾನು ಸಿದ್ಧನೇ! ಹೇಳಿ ಹೇಳಿ ಯಾವ ಯುದ್ಧವನ್ನಾರಂಭಿಸಬೇಕು? ಏನು ಗದಾಯುದ್ಧವೇ? ಅಥವಾ ಮಲ್ಲಯುದ್ಧವೇ?

**ಕೃಷ್ಣ** :—ನಿನ್ನ ಮನ ಬಯಸಿದ ಯುದ್ಧವನ್ನಾಡು.

**ರಾಜ** :—ಎಲೋ ದ್ವಾರಕಾನಿವಾಸಿಯೋ! ಈ ಹೊತ್ತಿನವರೆಗೆ ಇದ್ದ ನಮ್ಮ ನಿಮ್ಮ ಮಿತ್ರತ್ವವು ಮುಕ್ತಾಯವಾಯಿತು ಈಗ್ಗೆ ಪರಸ್ಪರರು ವೈರಿಗಳಾಗಿ ನಿಂತಿದ್ದೇವೆ ತೋರಿಸು ನಿನ್ನ ಪರಾಕ್ರಮವನ್ನು. ಇದೋ ಇಂದ್ರಾಯುಧಕ್ಕೆ ಸಮಾನವಾದ ಈ ಗದಾ ಪ್ರಹಾರವನ್ನು ಸಹಿಸು.

**ಕೃಷ್ಣ** :—ಅದನ್ನು ತೃಣಪ್ರಾಯವಾಗಿ ಗಣಿಸುವ ಈ ಚಕ್ರದಾಘಾತವನ್ನಾದರೂ ನೋಡು (ಚಕ್ರ ಬಿಡುವನು ಗದೆಯು ತುಂಡಾಗುವದು.)

**ರಾಜ** :—ಎಲೊ ಏ ಕ್ಷುಲ್ಲಕಾ! ನಿಮ್ಮ ಈ ಯುದ್ಧವು ಪರಾಕ್ರಮದ ಯುದ್ಧವೇ? ಹೆಂಗಸರಂತೆ ದೂರನಿಂದ ಧನುರ್ಬಾಣಗಳ ಸಹಾಯದಿಂದಲೂ ಅಥವಾ ಈಗೇನು ನನ್ನ ಮೇಲೆ ಯೋಜಿಸಿದೇ ಇಂತಹ ಚಕ್ರ

ಗಳ ಸಹಾಯದಿಂದಲೂ ಶತ್ರುಸಂಹಾರವನ್ನು ಪರಸ್ಪರಿಯಾಗಿ ಮಾಡುವ ನೀವು ಪರಾಕ್ರಮಿಗಳೇ? ಅಚ್ಛಾ ಹೇಡಿಗಳು. ಎಲೋ! ಏ! ದ್ವಾರಕೆಯ ಕರುವೇ? ಧನುರ್ಬಾಣಗಳನ್ನಾಗಲೀ, ಚಕ್ರಗಳನ್ನು ಬಿಡುವದಕ್ಕಾಗಲೀ, ನೀವು ನಿಮ್ಮ ಬುದ್ಧಿ ಬಲದಿಂದ ಒಂದು ಯಂತ್ರ ರಚನೆಯನ್ನು ಮಾಡಿಕೊಂಡಿದ್ದರೆ ಇವಕ್ಕೂ ಹಗುರಾಗುತ್ತಿದ್ದಿಲ್ಲವೇ? ಆಗಲಾಗಲಿ ಹೆಂಗಳೆಯರಂತೆ ದೂರದಲ್ಲಿ ನಿಂತುಕೊಂಡು ಬೇಕಾದ ಹಾಗೆ ಶಸ್ತ್ರಪ್ರಯೋಗವನ್ನು ಮಾಡು. ಈ ಬಾಹುಗಳಿರುವ ತನಕ ಹೋರಾಡದೇ ಬಿಡೆನು.

**ಕೃಷ್ಣ** :—ಎಲೋ ಏ ಕರಡಿಯೇ! ಖಡ್ಗ ಯುದ್ಧಕ್ಕಾದರೂ ಒಡಂಬಡುವಿಯಾ?

**ರಾಜ** :—ಪರವಿಲ್ಲ. ಅದು ವೀರರಿಗೆ ಸಲ್ಲತಕ್ಕ ಯುದ್ಧವು. ಅದೋ ಅಲ್ಲಿ ಖಡ್ಗಗಳವೆ ತೆಗೆದುಕೊ ನೀನು ಒಯಸಿದ್ದನ್ನು.

**ಕೃಷ್ಣ** :—ಆಗಲಿ ಪ್ರಾರಂಭಿಸು. (ಖಡ್ಗ ಯುದ್ಧದಲ್ಲಿ ಕೃಷ್ಣನು ಬೀಳುವನು)

**ರಾಜ** :—ಹೇಗಿದೆ ಕರಡಿಯ ಕಡಿತವು? ಹೇಗಿದೆ? ಅಸ್ತು ಸೋತವನನ್ನು ಹೀಯ್ಯಾಳಿಸುವದು ನೀತಿಯಲ್ಲ. ಪಾರುಪತ್ಯಗಾರರೇ! ಇವನ ಆರೈಕೆಗಾಗಿ ಇವನ ಮಿತ್ರನಿಗೆ ಸಹಾಯಕರಾಗಿರಿ. ನಡೆ ಮಗೂ ಮಂದಿರವನ್ನು ಸೇರುವಾ. (ಹೋಗುವರು)

**ಪಾರುಪತ್ಯ** :—ಓ! ಅಯ್ಯಾ! ನಿನ್ನ ಮಿತ್ರನು ನಮ್ಮ ಮಹಾರಾಜರೊಡನೆ ಯುದ್ಧಮಾಡಲಿಕ್ಕೆ ಬಂದಿದಿಲ್ಲವೇ ಅವನು ಈಗ್ಗೆ ಯುದ್ಧದಲ್ಲಿ ಬಹು ಪ್ರಯಾಸವನ್ನು ಹೊಂದಿ ದೀರ್ಘ ನಿದ್ರೆಯನ್ನು ಮಾಡುತ್ತಿರುವನು ನೋಡಿಲ್ಲಿ?

**ವಿಜಯ** :—ಎಲ್ಲಿ.

**ಪಾರುಪತ್ಯ** :—ಇಲ್ಲಿ.

**ವಿಜಯ** :—ಕೃಷ್ಣಯ್ಯಾ! ಕೃಷ್ಣಯ್ಯಾ! ಏನಿದು ಕೃಷ್ಣಯ್ಯನ ಸ್ಮೃತಿಯೇ ತಪ್ಪಿಹೋಗಿದೇ ಆಂ, ಆಂ, ಆಂ,



ಜಾಂಬುವಂತ - ಹೇಗಿದೆ ಕರಡಿಯು ಕಡ್ತ?

**ಪಾರುಪತ್ಯ** :—ಇದೋ ಸ್ವಲ್ಪ ನೀರು ಕುಡಿಸಿ ಗಾಳಿಯನ್ನು ಹಾಕಿದರೆ ನಿನ್ನ ಮಿತ್ರನು ಎಚ್ಚರಿಯುವನು.

**ವಿಜಯ** :—ಅಯ್ಯೋ! ಕೃಷ್ಣಯ್ಯನಿಗೆ ಬಲವಾದ ಘಾಯಗಳಾಗಿವೆ ಹೀಗಿರಲು ಇವನು ಬದುಕುವದು ಸಾಧ್ಯವೇ ಆಂ ಆಂ ಆಂ.

**ಪಾರುಪತ್ಯ** :—ಅಯ್ಯಾ! ಭಯಪಡಬೇಡ. ಎಂತಹ ಗಾಯಗಳಾದರೂ ಅವುಗಳನ್ನು ಗುಣಪಡಿಸುವ ಮದ್ದುಗಳು ನಮ್ಮಲ್ಲಿವೆ. ತರುವೆನು ತಾಳು.

**ವಿಜಯ** :—ತಾರಯ್ಯಾ! ... ... ... (ತಂದು ಕೊಡುವನು ಇಬ್ಬರೂ ಕುಡುವರು

**ಕೃತ್ತಿಕೆ** :— (ಬಂದು) ಅಯ್ಯಾ! ಪಾರುಪತ್ಯಗಾರನೇ! ಯುದ್ಧದಲ್ಲಿ ಗಾಯಹೊಂದಿದ ಆ ದ್ವಾರಕಾನಿವಾಸಿಯನ್ನು ಆರೈಕೆಗಾಗಿ ತಮ್ಮ ಮಂದಿರಕ್ಕೆ ಕರೆದುಕೊಂಡು ಬರುವದಕ್ಕೆ ಜಾಂಬುವತೀ ದೇವಿಯವರ ಅಪ್ಪಣೆಯಾಗಿದೆ.

**ಪಾರುಪತ್ಯ** :—ಇದಕ್ಕೆ ಜಾಂಬುವಂತ ದೊರೆಗಳೊಪ್ಪಿರುವರೋ?

**ಕೃತ್ತಿಕೆ** :—ಅವರು ಒಪ್ಪಿಕೊಂಡಿರುವಂತೇ ನಾನಿತ್ತ ಬಂದೆನು.

**ವಿಜಯ** :—ಅವರಾರು ಜಾಂಬುವತೀ ದೇವಿಯವರು?

**ಪಾರುಪತ್ಯ** :—ಅವರು ಜಾಂಬುವಂತ ಮಹಾರಾಜರ ಕುಮಾರಿಯರು.

**ವಿಜಯ** :—ಅಹಹ ಏನು ನಿಮ್ಮ ಜನಾಂಗದ ಔದಾರ್ಯವಣ್ಣಾ! ದೇವರ ಗುಣಗಳೆಲ್ಲವೂ ನಿಮ್ಮಲ್ಲಿ ನೆಲಸಿವೆ. ಆಗಲಿ ನಡೆ ಈತನನ್ನು ಹೊತ್ತುಕೊಂಡು ಅತ್ತವೇ ಹೋಗುವಾ? ಇಲ್ಲಿ ಬೇಡ ಗಾಯಗಳಲ್ಲಿ ಗಾಳಿ ತುಂಬೀತು ಬೈಲು ಪ್ರದೇಶದಲ್ಲಿ ಬೇಡ (ಇಬ್ಬರೂ ಕೂಡಿ ಹೊತ್ತುಕೊಂಡು ಹೋಗುವರು)

ರೋಹಿಣಿ ॥ ಪ್ರವೇಶ ॥

**ರೋಹಿಣಿ** :—ನಮ್ಮ ರಾಜಪುತ್ರಿಯ ಸ್ವಭಾವಕೇ ವಿಚಿತ್ರವಾದದ್ದು. ಯುದ್ಧದಲ್ಲಿ ಗಾಯಹೊಂದಿದ ಪುರುಷನು ಯಾವನೋ ಏನೋ ಅವನನ್ನೇ ಶ್ರೀಕೃಷ್ಣ ಮಹಾರಾಜರೆಂದು ನಂಬಿಬಿಟ್ಟಿದ್ದಾರೆ. ಇರಬಹುದಾದು

ಕಾನಿವಾಸಿಯು. ಅಷ್ಟು ಮಾತ್ರಕ್ಕೆ ಅವನು ಕೃಷ್ಣರಾಜನಾಗಬಲ್ಲನೇ? ಕೃಷ್ಣರಾಜರು ಹೀಗೆ ಪರಿವಾರವಿಲ್ಲದೇ ಏಕಾಂಗಿಗಳಾಗಿ ಪ್ರವಾಸಕ್ಕೆ ಹೊರಡಬಹುದೇ?

**ಕೃತ್ತಿಕೆ** :—ಏನು ರೋಹಿಣೀ! ಮತ್ತೇನು ಸಮಾಚಾರ?

**ರೋಹಿಣಿ** :—ತೀವ್ರವೇ! ಆ ಯುದ್ಧದಲ್ಲಿ ಗಾಯಪಟ್ಟ ದ್ವಾರಕಾನಿವಾಸಿಯನ್ನು ಆರೈಕೆಗಾಗಿ ತಮ್ಮ ಮಂದಿರಕ್ಕೆ ಕರೆದುಕೊಂಡು ಬರಲು ಜಾಂಬುವತೀ ದೇವಿಯವರು ಹೇಳಿದ್ದಾರೆ.

**ಕೃತ್ತಿಕೆ** :—ಅವನನ್ನು ಅವನ ಮಿತ್ರನೂ, ಮತ್ತು ಪಾರುಪತ್ಯಗಾರನೂ ಸೇರಿ ಕರೆದುಕೊಂಡು ಆ ಮಾರ್ಗವಾಗಿ ಜಾಂಬುವತೀ ದೇವಿಯವರ ಮಂದಿರವನ್ನು ಸೇರಿದರು. ಅದಿರಲಿ ರೋಹಿಣಿ! ರಾಜಪುತ್ರಿಯವರಾದ ತಾವು ಹೀಗೆ ಸಾಮಾನ್ಯ ಮಾನವನ ಆರೈಕೆಯನ್ನು ಮಾಡುವದು ಏಚಿತವೋ?

**ರೋಹಿಣಿ** :—ಅವನನ್ನು ಅವರು ಸಾಮಾನ್ಯ ಮಾನವರೆಂದು ಭಾವಿಸಿಲ್ಲ. ಅವನೇ ಶ್ರೀಕೃಷ್ಣ ಮಹಾರಾಜರೆಂದು ಭಾವಿಸಿಬಿಟ್ಟಿದ್ದಾರೆ.

**ಕೃತ್ತಿಕೆ** :—ಏನವನು ದ್ವಾರಕೆಯ ಶ್ರೀಕೃಷ್ಣರಾಜನೇ?

**ರೋಹಿಣಿ** :—ಅಹುದು ಹಾಗೆಂದವರು ಹೇಳುತ್ತಿರುವರು.

**ಕೃತ್ತಿಕೆ** :—ಬರಬರುತ್ತ ಜಾಂಬುವತೀ ದೇವಿಯವರ ಹುಚ್ಚು ಹೆಚ್ಚಾಗುತ್ತಿರುವದು ಉಪಾಯವಿಲ್ಲ. ಅವರೇ ಶ್ರೀಕೃಷ್ಣರಾಜರೆಂದು ಇವರಿಗಾರು ಹೇಳಿದವರು? ಇವರೆಂದಾದರೂ ಅವರನ್ನು ನೋಡಿದವರೇ?

**ರೋಹಿಣಿ** :—ಇವರೆಂದೂ ಅವರನ್ನು ನೋಡದಿದ್ದರೂ, ಇವರ ಅಂತಃಕರಣವು ಅವನೇ ದ್ವಾರಕೆಯ ಕೃಷ್ಣರಾಜರೆಂದು ಹೇಳುತ್ತಿರುವದಂತೆ.

**ಕೃತ್ತಿಕೆ** :—ಅವರು ಹಾಗೆ ವಿಚಾರ ಮಾಡಿ ಖಂಡಿತವಾಗಿ ಮೋಸ ಹೊಂದುವರು.

**ರೋಹಿಣಿ** :—ಅದ್ಭುತೂ ಕಂಡ ಸಮಾಚಾರವೇ.

**ಕೃತ್ತಿಕೆ** :—ಹಾಗಾದರೆ ಆ ಪುರುಷನನ್ನು ಮಂದಿರದಲ್ಲಿ ತಂದಿರಿಸಿಕೊಳುವದಿನ್ನೂ ಪ್ರಮಾದವು.

**ರೋಹಿಣಿ :**— ಪ್ರಮಾದವಲ್ಲದೇ ಮತ್ತೇನು ?

**ಕೃತ್ತಿಕೆ :**—ರೋಹಿಣಿ! ಹೀಗೆ ಪರಪುರುಷನನ್ನು ಮಂದಿರದಲ್ಲಿ ತಂದಿರಿಸಿ ಕೊಳ್ಳುವದಕ್ಕೆ ಮಹಾರಾಜರಾದರೂ ಹೇಗೆ ಒಪ್ಪಿಗೆಯನ್ನು ಕೊಟ್ಟಿದ್ದಾರು ?

**ರೋಹಿಣಿ :**— ಅಚ್ಚುದ ಮಗಳ ಇಚ್ಛೆಯೇ ಮಹಾರಾಜರ ಇಚ್ಛೆಯು. ಮಹಾರಾಜರು ಈ ವಿಷಯದಲ್ಲಿ "ಮಗಳಾದ ದೇವಯಾನೆಯ ಇಚ್ಛೆಯಂತೆ ಕುಣಿದಾಡುವ ಅಸುರ ಗುರುಗಳಾದ" ಶುಕ್ರಾಚಾರ್ಯರನ್ನು ಸಹ ಮೀರಿಸುವರು.

**ಪಾರುಪತ್ಯ :**—ಏನು ಕೃತ್ತಿಕಾ ರೋಹಿಣಿಯರೇ! ರಾಜಕುಮಾರಿಯು ಹತ್ತಿರದಲ್ಲಾರೂ ಇಲ್ಲವಲ್ಲಾ ತೀವ್ರವಾಗಿ ಹೋಗಿ, ಆ ದ್ವಾರಕಾ ನಿವಾಸಿಯನ್ನು ಅಲ್ಲಿಯೇ ತಂದಿರಿಸಿರುವೆನು ಹೋಗಿ ತೀವ್ರ [ಹೋಗುವರು] ನಮ್ಮ ಜಾಂಬುವಂತ ದೊರೆಗಳ ಸಮಾನರಾದ ದಯಾಳುಗಳು ಈ ಧರಣಿಯಲ್ಲಿ ಯಾರೂ ಇಲ್ಲ. ಯಾವ ಶತ್ರುವು ತಮ್ಮ ಭಾಗ್ಯದ ಸಿರಿಯನ್ನು ಸೆಳೆಯಲಪೇಕ್ಷಿಸಿ ರಕ್ತಪಾತವನ್ನು ಮಾಡಲಿಕ್ಕೆ ಸಿದ್ಧನಾಗಿ ಯುದ್ಧದಲ್ಲಿ ಗಾಯ ಹೊಂದಿರುವನೋ? ಅಂತಹ ವೈರಿಯಲ್ಲಿ ಇಷ್ಟು ಕನಿಕರವನ್ನು ತೋರುವ ದೈವೀ ಗುಣದವರು ನಮ್ಮ ಜಾಂಬುವಂತ ಮಹಾರಾಜರ ವಿನಃ ಮತ್ತಾರಾದರೂ ಈ ಭೂಮಿಯಲ್ಲಿರುವರೇ? ಏನಾದರೂ ದೇವರು ನ್ಯಾಯ ಪಕ್ಷಪಾತಿಯು ಅಂತೇ ನಮ್ಮ ಮಹಾರಾಜರು ಯಶಸ್ವಿಗಳಾದರು. ಅಸ್ತು ಸಮಯವು ಬಹಳವಾಯಿತು ಸ್ನಾನಪಾನಾದಿಗಳಿಗೆ ಹೋಗುವಾ! (ಹೋಗುವರು)

[ಪ್ರವೇಶ]

ಜಾಂಬುವತಿಯ ಮಂದಿರ, ಕೃಷ್ಣನು ಮಂಚದಲ್ಲಿ ಮಲಗಿರುತ್ತಾನೆ. ವಿಜಯನು ಹತ್ತಿರದಲ್ಲೇ ಇರುತ್ತಾನೆ.

**ಜಾಂಬುವತಿ :**—ನಿಶ್ಚಯವಾಗಿ ಈತನೇ ನನ್ನ ಜೀವನೇಶನಾದ ಶ್ರೀಕೃಷ್ಣದೇವನು.

ರಾಗ || ಪುರಿಯಾ || ತಾಳ ತ್ರಿವಟ ||

|| **ಪದ** || ಮಮಜೀವನೇಶಾ | ಮನವೆ ಈತನೇ | ಕಾಮಿತವಾನನು |
ಕ್ರಮದಿ ಪಡೆಯುವೆ || ಪಲ್ಲ ||

ಈಪ್ಸೆಸೀಲಕ್ಷಣಂಗಳೊ | ಅದಾರು ತಾಳಿಹನ್ಯೆ | ಯದುಕುಲೇಂ
ದ್ರನಾ | ವಿನಃ ಪೋದಿನಿಯೋಳ್ | ನರಕುಲದೊಳಗೇ || ೧ ||

**ವಿಜಯ**:— [ಸ್ವಗತ] ಈ ರಾಜಕುಮಾರಿಯು ಪರಳಂತೆ ಕಾಣದೇ ಕೇವಲ ನಮ್ಮ ಆಪ್ತರಂತೆ ಕಾಣುತ್ತಿರುವ ಕಾರಣವೇನಿರಬಹುದು ?

**ಜಾಂಬುವತಿ**:—ಅಯ್ಯಾ ! ಪ್ರವಾಸಪಲ್ಲಿರುವ ನಿಮ್ಮ ಮಿತ್ರರಿಗಿಂತಹ ಕಷ್ಟವು ಬರಬಾರದಾಗಿತ್ತು.

**ವಿಜಯ**:- ಅಮ್ಮಾ ! ಹಟಮಾರಿಗಳ ಹಣೇಬರಹವೇ ಹೀಗೆ.

**ಜಾಂಬುವತಿ**:—ಆಪದ್ದಾಗಿದೆ. ಇವರ ಗಾಯಗಳು ಗುಣವಾದ ಮೇಲೆ ಪ್ರವಾಸವನ್ನು ಮುಂಜರಿಸದೇ ನೆಟ್ಟಗೆ ದ್ವಾರಕೆಗೆ ಹೋಗಿಬಿಡಿ ಇವರಿಗೆ ಈಪರಿ ಗಾಯಗಳಾದಷ್ಟಕ್ಕೆ ನನ್ನ ತಂದೆಗಾದರೂ ಬಹೂ ದುಃಖವಾಗಿದೆ.

**ವಿಜಯ**:– ಆಗಿರಬಹುದು ಪಾಪ. ಸುಕುಮಾರ ದೇಹಕ್ಕೆ ತಗಲಿದ ಗಾಯುಗಳನ್ನು ನೋಡಿ ಯಾರಿಗಾದರೂ ವ್ಯಸನವಾಗುವದು ಸ್ವಾಭಾವಿಕ.

**ಜಾಂಬುವತಿ**:—ಅಯ್ಯಾ ! ನಿಮ್ಮ ಮಿತ್ರರಾದರೂ ಬಹು ಬಲಶಾಲಿಗಳಾಗಿದ್ದಾರೆ.

**ವಿಜಯ**:— ಅಮ್ಮನವರೇ ಆಕಸ್ಮಾತ್ತಾಗಿ ಈತನು ಯುದ್ಧದಲ್ಲಿ ಸೋತನಲ್ಲದೇ ಸ್ವಾಭಾವಿಕವಾಗಿ ಎಂದೂ ಸೋಲತಕ್ಕವನಲ್ಲ. ವಿಶೇಷವೇನು? ಯುದ್ಧದಲ್ಲಿ ಈತನು ಸೋತದ್ದು ಇದೇ ಮೊದಲೆಂದರೂ ಅನ್ನಬಹುದು.

**ಜಾಂಬುವತಿ**:— ಅಂತಹ ಪರಾಕ್ರಮಿಗಳೇ ಇವರು.

**ವಿಜಯ**:—ಅಮ್ಮಾ ಯಾವನು ಶಕಟ, ಧೇನುಕ, ತೃಣಾವರ್ತಕರನ್ನು ಲಿಲಾಮಾತ್ರದಿಂದ ಸಂಹರಿಸಿದನೋ ಅವನು ಸಾಮಾನ್ಯ ಪರಾಕ್ರಮಿಯೇ ? ಯಾವನು ಕಂಸ ಚಾಣೂರ ಮುಷ್ಟಿಕರನ್ನು ನಿಮಿಷಮಾತ್ರವಲ್ಲಿ ನೆಲಕ್ಕುರುಳಿಸಿದನೋ ಅವನು ಸಾಮಾನ್ಯ ಪರಾಕ್ರಮಿಯೇ ? ಅದು ಬಿಡಿ. ಯಾವನು ಜರಾಸಂಧ ಸಮ್ರಾಟನನ್ನು ಹದಿನಾರು ಸಾರೆ ಸೋಲಿಸಿ ಓಡಿಸಿದನೋ ಅವನು ಸಾಮಾನ್ಯ ಪರಾಕ್ರಮಿಯೇ? ಗೋವರ್ಧನ ಪರ್ವತವನ್ನು ಕಿರಿವೆರಳಿನ ಮೇಲೆ ಹಿಡಿದವನೂ, ಕಾಳಿಯಂಥ ಸರ್ಪರಾಜನನ್ನು ದಂಡಿಸಿದವನೂ ಸಾಮಾನ್ಯ ಪರಾಕ್ರಮಿಯೇ?

**ಜಾಂಬುವತಿ:—** ನೀನು ಹೇಳುವ ಪರಾಮಕ್ರಮಗಳನ್ನು ಮಾಡಿದವರು ದ್ವಾರಕೆಯ ಕೃಷ್ಣರಾಜರಲ್ಲವಲ್ಲಾ ?

**ವಿಜಯ:—** ಮತ್ತೆ ಇವರಾರು ?

**ಕೃಷ್ಣ:—** ವಿಜಯಾ! ಇದೇನು ಮಾಡಿದಿ ನಿನ್ನ ಹೃದಯದಲ್ಲಿ ಗುಪ್ತವೇ ನಿಲ್ಲುವದಿಲ್ಲ.

**ವಿಜಯ:—** ಅಯ್ಯೋ ಪ್ರಮಾದವು. ಎಲ್ಲಾ ಸಂಗತಿಗಳನ್ನು ಹೇಳಿಬಿಟ್ಟೆನಲ್ಲಾ! ತಾಯಿ ರಾಜಕನ್ನಿಕೆ! ಯಾವದೋ ಒಂದು ಕಾರಣಕ್ಕಾಗಿ ನನ್ನ ಮಿತ್ರನು ತನ್ನ ಚರಿತ್ರೆಯನ್ನು ಗುಪ್ತವಾಗಿರಿಸುವದಕ್ಕೆ ಹೇಳಿದ್ದನು. ಮೂರ್ಖನಾದ ನಾನು ಅದನ್ನು ಹೊರಗೆಡಹಿದೆನು ಆದರೂ ಪರವಿಲ್ಲ. ತಾವು ಮಾತ್ರ ಈ ಸಂಗತಿಯನ್ನು ದಯವಿಟ್ಟು ಯಾರಿಗೂ ಹೇಳಬೇಡಿ.

**ಜಾಂಬುವತಿ:—**

ರಾಗ—ಭೈರವಿ—ತಾಲ—ತ್ರಿಪಟ

॥ **ಪದ** ॥ ಮನವೆ ಮೋಸವನು । ನೆನೆಯಲಿಲ್ಲೆನಗೆ ॥
ಮನ್ಮಾಥಾನನು ಗುರುತಿಸುವ । ಕಾರ್ಯದೆ ಗೈದೆ ಘನಸಹಾಯವಾ ।
ವರಿಸಲಿವರಿಸದಿರಲಿ ತಾನೆನ್ನನು ।
ದ್ವಾರಕಾಧೀಶ ಕೃಷ್ಣಚಂದ್ರನು । ಮೊರೆತುದುತತ್ಪದಸೇವೆ ।
ಕಿಂಚಿತ । ಪರಮಭಾಗ್ಯದಿಂದೆನಗೀ ಜನುಮದಿ ॥

ಅಯ್ಯಾ! ಶ್ರೇಷ್ಠ ಪುರುಷರ ಚರಿತ್ರೆಯನ್ನು ಯಾರಿಗೂ ಹೇಳಬೇಡವೆಂದು ಹೇಳುವಿಯಲ್ಲವೇ! ಇದೇನು ?

**ಕೃಷ್ಣ:—** ರಾಜತನಯೇ! ಯದ್ಯಪಿ ನಾನು ಶ್ರೇಷ್ಠನಿದ್ದರೂ, ಈ ಜಾಂಬುವಂತ ರಾಜನಿಗೆ ಸೋತು ಕನಿಷ್ಠನಾಗಿದ್ದೇನೆ. ಇಂತಹ ಕನಿಷ್ಠನ ಚರಿತ್ರೆಯನ್ನು ಗೌರವಿಸುವರಾರು ? ಪ್ರಯುಕ್ತ ಯಾರಿಗೂ ಈ ಸಮಾಚಾರವನ್ನು ತಿಳಿಸಬಾರದಾಗಿ ಪ್ರಾರ್ಥಿಸುತ್ತೇನೆ.

**ಜಾಂಬುವತಿ:—** ಮಹಾಸ್ವಾಮಿ! ಹೀಗೆ ತಾವು ಕೈಂಕರದಿಂದ ಮಾತುಗಳನ್ನಾಡಬಾರದು. ಇರಲಿ ಮೊದಲು ತಮ್ಮ ಗಾಯಗಳನ್ನು ಗುಣಪಡಿಸುವ

ಉಪಾಯಗಳನ್ನು ಮಾಡುವಾ ! ತಮಗೆ ಗುಣವಾಗುವತನಕ ತಮ್ಮ ಸೇವೆಯಲ್ಲಿರುವದಕ್ಕಾಗಿ ಜನಕನಿಂದ ನಾನು ಅಪ್ಪಣೆಯನ್ನು ಪಡೆದು ಕೊಂಡಿದ್ದೇನೆ. ತಾವಾದರೂ ನನ್ನ ಉಪಚಾರವನ್ನು ಸ್ವೀಕರಿಸಬೇಕು.

**ಕೃಷ್ಣ**:— ರಾಜತನಯೇ ! ನಿನ್ನ ಜನಕನು ಕೇವಲ ದೇವಸಮಾನನೂ, ಪ್ರತ್ಯಕ್ಷ ಮಗಳನ್ನು ತನ್ನ ನೆರೆಯ ಚಿಕಿತ್ಸೆಗಾಗಿ ಯೋಜಿಸಿರುವನಲ್ಲವೇ? ಅಹಹ ಲೋಕದಲ್ಲಿ ಇಂಥ ಪವಿತ್ರಾತ್ಮರಿರುವರಂತೆ? ಉದಯಾಸ್ತಗ ಳಾಗುತ್ತವೆ. ಆಗಲಿ ರಾಜಕುಮಾರಿಯೇ ನೀನು ನಿನ್ನ ಅಪೇಕ್ಷೆಯಂತೆ ದೀನನಾದ ನನ್ನನ್ನುಪಚರಿಸು.

**ವಿಜಯ**:— ಕೃಷ್ಣಯ್ಯಾ? ಇಂತಹ ಸರಲ ಮಾನಸರು ನಮ್ಮ ಆರ್ಯಾ ವರ್ತದಲ್ಲಿರುವರೇ ?

**ಕೃಷ್ಣ**:— ವಿಜಯಾ! ಅವರು ಹೆಸರಿನ ಆರ್ಯರು ಇಂತಹ ಶ್ರೇಷ್ಠಗುಣ ಸಮುಚ್ಚಯಗಳುಳ್ಳವರನ್ನು ಪಶುಕೋಟಿಯಲ್ಲಿ ಗಣಿಸುವ ನಮ್ಮ ಬುದ್ಧಿಗೆ ಬೆಲೆಯೇ ಇಲ್ಲ. ( ಬಾಧೆ ನಟಿಸಿ ) ಅಯ್ಯೋ ! ಅಯ್ಯೋ ! ವಿಜಯಾ ! ಕರವನ್ನು ದಿಂಬಿನ ಮೇಲಿರಿಸಬಾರದೇ ?

**ಜಾಂಬುವತಿ**:— ಆಯ್ಯಾ ತಡೆ. ಇವರ ಆರೈಕೆ ಭಾಗವು ನನ್ನದು. ನೀನಂತೂ, ಇವರ ಮಿತ್ರನು. ಯಾವಾಗಲೂ ಇವರ ಶೇವೆಯಲ್ಲಿರ ತಕ್ಕವನು. ಪ್ರಯುಕ್ತ ನಾನು ವಹಿಸಿಕೊಂಡಿರುವ ಈಗಿನ ಶೇವೆಯಲ್ಲಿ ಪಾಲುಗಾರನಾಗಬೇಡ.

**ವಿಜಯ**:— ರಾಜಕುಮಾರಿಯೇ ! ನೀನು ಅವಿವಾಹಿತಳೆಂದು ನಮ್ಮ ಕೃಷ್ಣಯ್ಯನು ನಿನಗೆ ಸ್ಪರ್ಶ ಮಾಡಗೊಡುತ್ತಿರುವನು ಬಲ್ಲಿಯಾ ? (ಇಲ್ಲವಾದರೆ ಪರಾಂಗನೆಯರನ್ನೆಂದಾದರೂ ಮುಟ್ಟಿಸಿಕೊಳ್ಳತಕ್ಕವನೇ!)

**ಜಾಂಬುವತಿ**:— ಆ ವಿಷಯಕವಾಗಿ ಇವರ ಲೌಕಿಕವನ್ನು ನಾನು ತುಂಬಾ ಕೇಳಿರುವೆನು.

**ಕೃಷ್ಣ**:— ವಿಜಯಾ ! ಮೊಳಕಾಲಲ್ಲಿ ಘನವಾದ ವೇದನೆಯಾಗುತ್ತಿರುವದು ಸ್ವಲ್ಪ ಹಿಸುಕು. ( ವಿಜಯನು ಹಾಗೆ ಮಾಡಲುದ್ಯುಕ್ತನಾಗುವನು. )

**ಜಾಂಬುವತಿ**:— ಆ ಕೆಲಸವನ್ನೂ ಕೂಡಾ ನಾನೇ ಮಾಡುವೆನು.



ಕೃಷ್ಣ:- ಛೀ ಛೀ ಬೇತ ಬೇಡ. ನೀನು ಪರಳು. ನಿನ್ನಿಂದಿಂತಹ ಸೇವೆಯನುಕೊಳ್ಳುವ ಇಚ್ಛೆ ನನಗಿಲ್ಲ.

**ಕೃಷ್ಣ:**— ಅದು ಕೇವಲ ಅನ್ಯಾಯ! ಹಾಗೆ ಮಾಡುವದು ಬೇಡ. ನೀನು ಪರಳು; ಪ್ರಯುಕ್ತ ಆ ಕೆಲಸವನ್ನು ನಿನ್ನಿಂದ ಕೊಳ್ಳುವದಕ್ಕೆ ನಾನೊಪ್ಪೆನು.

**ಜಾಂಬುವತಿ:**— ಮಹಾನುಭಾವರೇ! ಹಾಗೆ ಸಂಕೋಚಪಡಲಾಗದು. ದಯಮಾಡಿ ನನ್ನ ಸೇವೆಯನ್ನು ಕೈಕೊಳ್ಳಿ. ಅಯ್ಯಾ ನೀನು ತೆರೆಯಾಗು, ನಾನು ನಿಮ್ಮ ಮಿತ್ರರ ಸಕಲ ಸೇವೆಗಳನ್ನೂ ಮಾಡಬಲ್ಲೆನು.

**ವಿಜಯ:**— (ಸ್ವಗತ) ಇವರು ಕಾಲಿಂದೀ ರುಕ್ಮಿಣೀದೇವಿಯರ ಅಧಿಕಾರವನ್ನು ಸೆಳೆಯಲಿತ್ತಿಸುವರೋ ಏನೋ? (ಪ್ರಕಾಶ) ಆಗಲಮ್ಮಾ ನೀವು ನಿಮ್ಮ ಅಪೇಕ್ಷೆಯಿದ್ದಂತೆ ಮಾಡಿಕೊಳ್ಳಿ.

[ ಜಾಂಬುವತಿಯು. ಕೃಷ್ಣನ ಕಾಲೊತ್ತುವದನ್ನು ಕೃತ್ತಿಕಾ ರೋಹಿಣಿಯರು ನೋಡುವರು. ]

**ಕೃತ್ತಿಕೆ:**— ರೋಹಿಣೀ ನೋಡಿದಿಯಾ ರಾಜಕುಮಾರಿಯ ಲೀಲೆಗಳನ್ನು?

**ರೋಹಿಣಿ:**— ಕೃತ್ತಿಕೇ ಜಾಂಬುವಂತ ಮಹಾರಾಜರು ತಮ್ಮ ಮಗಳಿಗೆ ಹೀಗೆ ಪರಪುರುಷನ ಸೇವೆಗಾಗಿ ಅವಕಾಶವನ್ನು ಕೊಡಬಾರದಾಗಿತ್ತು. ಏನದೂ, ಗಂಡನ ಸೇವೆಯನ್ನು ಹೆಂಡತಿಯು ಮಾಡುವಂತೆ ನಿರ್ಭಯರಾಗಿ ಆ ದ್ವಾರಕಾ ನಿವಾಸಿಯ ಕಾಲುಗಳನ್ನೊತ್ತಿರುತ್ತಿರುವರಲ್ಲವೇ?

**ಕೃತ್ತಿಕೆ:**— ನಡೆ ಇದೇ ಕ್ಷಣವೇ ಜಾಂಬುವಂತ ಧೊರೆಗಳಿಗೇ ಸಮಾಚಾರವನ್ನು ತಿಳಿಸಿ ಬಿಡುವಾ

**ರೋಹಿಣಿ:**— ಹಾಗೆ ಮಾಡುವದಲ್ಲದೇ ಅವರನ್ನು ಪ್ರತ್ಯಕ್ಷವಾಗಿ ಕರತಂದು ತೋರಿಸುವಾ

**ಕೃತ್ತಿಕೆ:**— (ಇಬ್ಬರು ಪರದೆಯ ಮುಂದೆ ಬಂದು) ಅದೋ ಪಾರುಪತ್ಯಗಾರರೊಡನೆ ಧೊರೆಗಳು ಇತ್ತಲೇ ಬಂದರು. ಹೂಂ ರೋಹಿಣೀ! ಹೇಳಿಬಿಡು ರಾಜಕುಮಾರಿಯ ಸಮಾಚಾರವನ್ನು.

**ರೋಹಿಣಿ:**— ನೀನೇ ಹೇಳಿ ಬಿಡಮ್ಮಾ ನನಗಂತೂ ಧೈರ್ಯವು ಸಾಲದು

**ಕೃತ್ತಿಕೆ:**— ಒಳ್ಳೇ ಅಂಜುಬುರುಕಿಯೋ ನೀನು. ಆಗಲೀ ನಾನೇ ಹೇಳುವೆನು. ಅದರಲ್ಲೇನು ಭಯ. (ಜಾಂಬುವಂತರಾಜನು ಬರುವನು)

**ಇಬ್ಬರು:**— ಮಹಾಪ್ರಭುಗಳಿಗೆ ಜಯ ಜಯಕಾರವು.

**ರಾಜ:**— ಏನು ಕೃತ್ತಿಕಾ ರೋಹಿಣಿಯರೇ? ಕುಮಾರಿಯು ಮಂದಿರದಲ್ಲಿರುವಳೇ! ಆ ದ್ವಾರಕಾ ನಿವಾಸಿಯ ಸ್ಥಿತಿಗತಿಯು ಹೇಗಿದೆ?

**ರೋಹಿಣಿ:**— ಮಹಾಸ್ವಾಮಿ! ಅವನ ಗಾಯಗಳು ಗುಣವಾಗುತ್ತಲಿವೆ ಆದರೆ

**ರಾಜ:**— ಅನುಮಾನವೇನು?

**ಕೃತ್ತಿಕಾ:**— ಜಾಂಬುವಂತೀದೇವಿಯವರನ್ನು ಅವನ ಆರೈಕೆಗಾಗಿ ನೇಮಿಸಿದ್ದು ಮಾತ್ರ ಸರಿಯಾಗಲಿಲ್ಲ.

**ರಾಜ:**— ಅದೇಕೆ? ಅದರಲ್ಲೇನು? ವ್ಯತ್ಯಯವು ತೋರಿತೇ?

**ರೋಹಿಣಿ:**— ದೇವಾ ಗಂಡನ ಸೇವೆಯನ್ನು ಹೆಂಡತಿಯು ಮಾಡುವಂತೆ ಇವರು ಆ ದ್ವಾರಕಾನಿವಾಸಿಯ ಸೇವೆಯನ್ನು ಮಾಡುತ್ತಲಿದ್ದಾರೆ.

**ರಾಜ:**— ವಿಚಾರವತಿಯಾದ ನನ್ನ ಮಗಳು ಹಾಗೆಂದೂ ಮಾಡಳು.

**ಪಾರುಪತ್ಯ:**— ನನ್ನದಾದರೂ ಅದೇ ಅಭಿಪ್ರಾಯವು.

**ಇಬ್ಬರೂ:**— ನಾವು ಹೇಳುವದು ಸುಳ್ಳಲ್ಲ ದೊರೆಗಳೇ! ಬೇಕಾದರೆ ಚಿತ್ತೈಸಿ.

**ರಾಜ:**— ನಡೆಯಿರಿ. ನೋಡುವಾ? (ಹೋಗಿ ನೋಡುತ್ತಾ ನಿಂತಿರುವಾಗ)

(ಪ್ರವೇಶ)

**ಕೃಷ್ಣ:**— ವನರಾಜತನಯೇ ನಿನ್ನ ಶುಶ್ರೂಷೆಯಿಂದ ನನ್ನ ಬೇನೆಗಳು ಬೇಗನೇ ಗುಣವಾಗುವವೆಂದು ನಂಬಿದ್ದೇನೆ.

**ಜಾಂಬುವತಿ:**— ಮಹಾಸ್ವಾಮಿ! ಅಷ್ಟಾದರೆ ಸಾಕು. ತಾವು ಸುಖವಾಗಿ ದ್ವಾರಕೆಯನ್ನು ಸೇರಿದುದಾದರೆ ನಮಗೆ ಪರಮಾನಂದವು.

**ಕೃಷ್ಣ:**— ಅದನ್ನು ಮಾತ್ರ ನಿರ್ಧಾರವಾಗಿ ಹೇಳಲಾರೆನು.

**ಜಾಂಬುವತಿ:**— ಏಕೆ ಹಾಗೆನ್ನುವಿರಿ?

**ಕೃಷ್ಣ:**— ನಿಮ್ಮಲ್ಲಿರುವ ಆ ಶ್ಯಮಂತಕ ಮಣಿಯನ್ನು ಸ್ವಾಧೀನಪಡಿಸಿಕೊ

ಳ್ಳದೇ ನನಗೆ ಹಾಗೆಯೇ ಬರಿಗೈಯಿಂದ ದ್ವಾರಕೆಗೆ ಹೋಗಲಿಕ್ಕೆ ಮಾರ್ಗವಿಲ್ಲ.

**ವಿಜಯ**:— ಏನು? ಪುನಃ ಯುದ್ಧಮಾಡುವಿಯೋ?

**ಕೃಷ್ಣ**:— ಅಹುದಹುದು ಮಾಡುವೆನು.

**ವಿಜಯ**:— ಇಷ್ಟು ನಿನ್ನ ಅವಸ್ಥೆಯಾಗಿದ್ದರೂ ಪುನಃ ಯುದ್ಧವೇ?

**ಕೃಷ್ಣ**:— ದೇಹದಲ್ಲಿ ಪ್ರಾಣವಿರುವತನಕ ಯುದ್ಧವನ್ನು ಮಾಡುವೆನು.

**ವಿಜಯ**:— ಕೃಷ್ಣಯ್ಯಾ! ಬೇಡವೋ? ಈ ಕಾಡು ಕರಡಿಯಗೂಡ ಹೋರಾಡುವದು ಬೇಡವೋ? ನಿನ್ನ ಕಾಲಿಗೆರಗುವೆನು. ಅವ್ಮಾ ನೀನಾದರೂ ಹೇಳು.

**ಜಾಂಬುವತಿ**:— ಮಹಾಸ್ವಾಮಿ! ಅದು ನಿಮ್ಮ ಪ್ರಸೇನ ಸರ್ದಾರನ ಮಣಿಯಂತಲ್ಲವೇ? ಅದರ ಸಲುವಾಗಿ ತಾವು ಹೋರಾಡುವದೇಕೆ? ಬೇಕಾದರೆ ಮಡಿದ ಪ್ರಸೇನನ ಅಣ್ಣನಾದ ಸತ್ರಾಜಿತನು ಬಂದು ಹೋರಾಡಿ ಪಡೆದುಕೊಂಡು ಹೋಗಲಿ.

**ಕೃಷ್ಣ**:— ರಾಜಕುಮಾರಿಯೇ ಪ್ರಸೇನ ಸತ್ರಾಜಿತರು ನಮ್ಮ ಪ್ರಜರಲ್ಲವೇ? ಪ್ರಜರು ಮಕ್ಕಳ ಸಮಾನರಲ್ಲವೇ! ಆ ಮಕ್ಕಳ ಹಿತವನ್ನು ಮಾಡುವದು ನಮ್ಮ ಕರ್ತವ್ಯವಲ್ಲವೇ?

**ಜಾಂಬುವತಿ**:— ಅದಹುದು ಆದರೆ ಸಾಧ್ಯವಿಲ್ಲದಿರುವಾಗ್ಗೆ ಮಾಡುವದೇನು?

**ಕೃಷ್ಣ**:— ನೀನು ನಿನ್ನ ಜನಕನ ವಿಷಯಕವಾದ ಅಭಿಮಾನದಿಂದ ಹೀಗೇ ಹೇಳುವಿ. ರಾಜಕುಮಾರಿಯೇ ನಿನ್ನ ಜನಕನನ್ನು ಜೈಸುವದು ಅಸಾಧ್ಯವೆಂದು ಹೇಳುವಿಯಾ?

**ವಿಜಯ**:— ಅವರು ಹೇಳುವದೇಕೆ ನಾನೇ ಹೇಳುವೆನು.

**ಕೃಷ್ಣ**:— ಏನು ಹೇಳುವಿ ನಿನ್ನ ತಲೆ?

**ವಿಜಯ**:— ಈ ಕಾಡು ಕರಡಿಯಗೂಡ ಹೋರಾಡಿ ಗೆಲಿಯುವದಸಾ

ಧ್ಯವು. ಅಸಾಧ್ಯವು. ಅಸಾಧ್ಯವು.

**ಕೃಷ್ಣ**:— ಆಗಲಿ ನಿಮ್ಮೀರ್ವರ ಭವಿಷ್ಯವನ್ನು ಸುಳ್ಳು ಮಾಡದಿದ್ದರೆ ನಾನು ದ್ವಾರಕಾಧೀಶನಾದ ಶ್ರೀಕೃಷ್ಣನೇ ಅಲ್ಲ.

**ಜಾಂಬುವಂತರಾಜ**:— (ಆತುರದಿಂದ ಬಂದು ಕೃಷ್ಣನಿಗೆರಗಿ) ದೇವಾ ದ್ವಾರಕಾಧೀಶನಾದ ಶ್ರೀ ಕೃಷ್ಣದೇವಾ ನಿನಗೆ ಅನನ್ಯಭಾವದಿಂದ ಶರಣು ಬಂದಿದ್ದೇನೆ. ಕ್ಷಮಿಸು. ಕ್ಷಮಿಸು

ರಾಗ। ಭೈರವಿ। ತಾಳ ತ್ರಿವಟ

॥ **ಪದ** ॥ ಪೊರೆಯೈ ಮೊರೆ ಬಂದೆ ನಿನಗೆ। ಹರಿಸರ್ವೋತ್ತಮಾ ॥ಪಲ್ಲ॥
ಕರುಣಾಸಾಗರ ನಿನ್ನವರ ಮಾಯಾ ಚಾರಿತ್ರ । ಅರಿತವರು ಯಾರು ॥
ಏನಿದೆನ್ನಯಾ। ದೀನದಕ್ಷಪ್ರಭೋ । ದೀನಪಾಲ ನಿನ್ನಾಜ್ಞೆಯಂತೆ ।
ಈ ಸಕಲ ಚರಾಚರ । ವಿಶ್ವವು ನಡೆದಿಹುದೈ ।

**ಕೃಷ್ಣ**:— ಯಾರು ? ಜಾಂಬುವಂತರಾಜರೇ!

**ವಿಜಯ**:— ಅಹುದು ಕೃಷ್ಣಯ್ಯಾ.

**ಕೃಷ್ಣ**:— ಹೀಗೇಕೆ ಮಾಡುತ್ತಿರುವನೋ ?

**ವಿಜಯ**:— ಅದಾರಿಗೆ ಗೊತ್ತಪ್ಪಾ.

**ರಾಜ**:— ದೇವಾ! ಶ್ರೀ ಕೃಷ್ಣಾ! ನೀನಾರೆನ್ನುವದನ್ನು ನಾನು ಬಲ್ಲೆನು. ಭೂಭಾರವನ್ನಿಳಿಸುವದಕ್ಕಾಗಿ ನರಾಕಾರವನ್ನು ತಾಳಿದ ನಾರಾಯಣನಲ್ಲವೇ ? ದೇವಾ! ನೀನು ನನ್ನನ್ನು ಪರೀಕ್ಷಿಸುವದಕ್ಕಾಗಿ ಹೀಗೆ ನಟನೆಯನ್ನು ಮಾಡಿದಿಯಾ ? ದೇವಾ! ಮಂದಮತಿಯಾಗಿಯೂ, ಮತ್ತೂ ಕಾಡು ಮಾನವನಾಗಿರುವ ನಾನು ನಿನ್ನ ಮಾಯದೊಳಗಿಂದ ಪಾರಾಗಬಲ್ಲೆನೇ ? ದಯಾಘನಾ! ಪಾಪಿಯಾದ ನಾನು ದ್ವಂದ್ವದಲ್ಲಿ ನಿನಗೆ ಅಸಹ್ಯವಾದ ಘಾಯಗಳನ್ನು ಮಾಡಿದನಲ್ಲವೇ ? ರಾಮಾವತಾರವನ್ನು ತಾಳಿದ ನಿನ್ನನ್ನು ನನ್ನ ಮೂಲ ಪುರುಷನಾದ ಜಾಂಬುವಂತದೇವನು ಅಖಂಡವಾದ ಭಕ್ತಿಯಿಂದ ಸೇವಿಸಿ ಧನ್ಯನಾದನು. ಅದೇ ಕೃಷ್ಣಾವತಾರವನ್ನು ತಾಳಿದ ನಿನ್ನನ್ನು ಆ ಜಾಂಬುವಂತದೇವನ ವಂಶಜನಾದ ನಾನು ಪರಿಪರಿಯಾಗಿ ಹಿಂಸೆಪಡಿಸಿ ಪಾತಕಿಯಾದೆನಲ್ಲವೇ ?

**ಕೃಷ್ಣ**:— ಜಾಂಬುವಂತರಾಜನೇ! ಏಳು. ಏಳು. ದುಃಖಿಸಬೇಡ ಮುನಿಜನಗಳೆಲ್ಲರೂ ನನ್ನ ಮೇಲಿನ ವೈಯುಕ್ತಿಕ ಪ್ರೇಮದಿಂದ ಹಾಗೆ ಅತಿಶಯವಾಗಿ ಕೊಂಡಾಡಿದ ಮಾತ್ರಕ್ಕೆ ನಾನು ಅವತಾರಿಯಾಗಬಲ್ಲೆನೇ? ಆ ಸ್ವತ್ವಗುಣ ನಿಧಾನನಾದ ರಾಮಭದ್ರವಿಭುವೆತ್ತ? ರಜತಮೋಗುಣಗಳಿಂದ ಸ್ವಾರ್ಥದ ಸಲುವಾಗಿ ಹೋರಾಡುವ ಈ ಕೃಷ್ಣನೆತ್ತ?

ರಾಗ ಮಾಲಕಂಸ| ತಾಲ ತ್ರಿವಟ

|| **ಪದ** || ಆ ಸ್ವಾಹಿಮಾಕರನೂ | ರಾಮನು । ಬ್ರಹ್ಮಾಂಡನಾಯಕನೂ ||
ನಾರಾಯಣಾ | ಯಾವಾತನ ನಾಮವನನುವರತ |
ದೇವೋತ್ತಮನಾಗಂಥ ಶಂಭುವೋ । ಭಾವಭಕುತಿಯಿಂ |
ದಲಿ ಭಜಿಸುವನೊ | ಅವನಿಗಾರು ಸಮ । ರೀ ವಿಶ್ವದೊಳು ||೧||

**ಜಾಂಬುವತಿ**:— ದೇವಾ! ಮೂರ್ಖರೂ, ಪಾಪಿಗಳೂ, ಮತ್ತು ಪರೋತ್ಕರ್ಷಾಸಹಿಷ್ಣುಗಳೂ, ನಿನ್ನನ್ನು ಹಾಗೆ ಸ್ವಾರ್ಥಿಯೆಂದಾಡಿಕೊಂಡರೂ ಸಾಧುಗಳಾದ ಮುನಿ ಜನಗಳು ಸುಳ್ಳಾಡತಕ್ಕವರೇ? ದ್ವಾರಕಾಧೀಶನೇ! ಪರರನ್ನು ವಂಚಿಸಿ ನೀನೇನು ಸ್ವಾರ್ಥಸಾಧನೆಯನ್ನು ಮಾಡಿಕೊಂಡಿರುವೇ? ಅದ್ವಿತೀಯ ವೀರನಾಗಿದ್ದರೂ, ಯಾರ ರಾಜ್ಯವನ್ನಪಹರಿಸಿದವನಲ್ಲಾ, ಅನೇಕ ಯುದ್ಧಗಳಲ್ಲಿ ವಿಜಯಶಾಲಿಯಾಗಿದ್ದರೂ, ಆ ಫಲವನ್ನು ಅನ್ಯರೇ ಭೋಗಿಸುತ್ತಿರುವರಲ್ಲದೇ? ನೀನು ಭೋಗಿಸಿದವನಲ್ಲ. ಈಗಿನ ಸಂದರ್ಭವನ್ನೇ ನೋಡು. ಆ ಸತ್ರಾಜಿತನ ಮಣಿಯನ್ನವನಿಗೆ ಕೊಡಿಸುವದರ ಸಲುವಾಗಿ ನೀನು ನಿನ್ನ ಪವಿತ್ರವಾದ ರಕ್ತವನ್ನು ಭೂಮಿಗೆ ಚಲ್ಲುತ್ತಿರುವೆ? ಇಂತಹ ನಿಸ್ವಾರ್ಥಿಯಾದ ನಿನ್ನನ್ನು ಜರೆಯುವ ನರರಿಗೆ ನರಕವು ತಪ್ಪುವದೇ?

**ರಾಜ**:— ದೇವಾ! ಪುರಾಣಪುರುಷಾ! ಭೂಮಿ ಸಿಮೇಗಳಲ್ಲಿ ಆಶೆಯುಳ್ಳ ಕ್ಷತ್ರಿಯರ ನಿಂದೆಗೆ ಎಡೆಕೊಡಬಾರದೆಂದು ಕುಶಲನಾದ ನೀನು ಸಮುದ್ರದೊಳಗಿನ ಎಲ್ಲರೂ ಬಿಟ್ಟುಕೊಟ್ಟ ಮಳಲಿನ ರಾಶಿಯ ಮೇಲೆ ನಿನ್ನ ದ್ವಾರಕಾವತಿಯನ್ನು ಕಟ್ಟಿಕೊಂಡಿಲ್ಲವೇ? ಇಂತಹ ನಿನ್ನ ನಿಂದೆಯನ್ನು ಮಾಡುವವರು ದೈತ್ಯರಲ್ಲದೇ ಮತ್ತಾರು ದೇವಾ?

**ಕೃಷ್ಣ**:— ಆಗಲಿ. ಜಾಂಬುವಂತರಾಜನೇ ನಿನ್ನ ಭಾವನೆಯಂತೆ ದೇವರು

ನಿನಗೆ ಫಲವನ್ನು ಕೊಡಲಿ. ಸದ್ಯಕ್ಕೆ ನಿನ್ನ ಅಪೇಕ್ಷೆಯೇನಿದೆ ?

**ರಾಜ:**— ದೇವಾ ನಾನು ಹೆಚ್ಚಿನದೇನು ? ಬೇಡಲಿ ? ನಾನೇನು ಬೇಡಿದರೂ ಅದು ನಿನಗೆ ಅಲ್ಪವಾಗಿಯೇ ತೋರುವದು. ಅಲ್ಲದೇ ನಿಸರ್ಗ ಸೌಖ್ಯಮಯವಾದ ಕಾಡನ್ನೇ ನನ್ನ ಸ್ವಾಧೀನಕ್ಕೆ ಕೊಟ್ಟಿರುವೆ. ಇಲ್ಲಿಯೇ ಸೌಖ್ಯವಾಗಿದ್ದೇನೆ. ಆ ನಾಗರಿಕರ ಕೃತ್ರಿಮ ಸುಖದ ಸಾಧನಗಳೇ ನನಗೆ ಬೇಡಾ! ಆದರೂ ಕಾಡಾವಾಸಕ್ಕೆ ಸಲ್ಲದ ಎರಡು ವಸ್ತುಗಳು ಮಾತ್ರ ನನ್ನಲ್ಲಿವೆ. ಆವುಗಳನ್ನು ನಿನ್ನ ಪಾದಕ್ಕರ್ಪಿಸುವೆನು; ಕೈಕೊಂಡು ನನ್ನನ್ನುದ್ಧರಿಸು.

**ವಿಜಯ :**— ನಮ್ಮ ಕೃಷ್ಣಯ್ಯನಿಗೆ ಅರ್ಪಿಸಲಿಕ್ಕೆ ಯೋಗ್ಯವಾದ ವಸ್ತುಗಳು ನಿನ್ನಲ್ಲೇನಿವೆ. ಜಾಂಬುವಂತರಾಜನೇ ?

**ರಾಜ:**— ಅಯ್ಯಾ ! ಬಂಧುವೇ ! ಕೃಷ್ಣದೇವನು ಕರುಣ ಸಮುದ್ರನು. ಭಕ್ತರು ವಿಶ್ವಾಸದಿಂದ ಅರ್ಪಿಸುವ ಒಂದು ತುಲಸೀದಲವನ್ನೂ ಕೂಡ ಬಹೂ ಪ್ರೇಮದಿಂದ ಸ್ವೀಕರಿಸತಕ್ಕವನಲ್ಲವೇ ?

**ವಿಜಯ :**— ಅದು ಮಾತ್ರ ನಿಜ.

**ರಾಜ:**— ಪ್ರಯುಕ್ತ ಆತನಿಗೆ ತಕ್ಕವುಗಳಾಗಿಯೂ, ನನಗೆ ಸಲ್ಲದಾಗಿರುವ ವಸ್ತುಗಳೆಂದರೆ ಆ ಶಿರಿಯನ್ನು ಪೆರೆಯುವ ಮಣಿ. ಅದನ್ನು ಕೃಷ್ಣಾರ್ಪಣ ಮಾಡುವದಕ್ಕಿಂತ ಮುಂಚಿತವಾಗಿಯೇ ಇದೊ ?

ರಾಗ— ಭೂಪ— ತಾಲ— ತ್ರಿವಟ.

॥ **ಪದ** ॥ ದೇವಾ ದಯಮಾಡಿ ಸ್ವೀಕರಿಸಯ್ಯಾ । ಯನ್ನಯ ತನುಭವೆಯಾ ॥
ದೇವ ಗುಣಗಳುಳ್ಳವಳೊ । ಸದು । ಭಾವದಿ ನಿನ್ನನು ಸದಾ ನೆನೆಯುವಳು ॥೧॥
ನೋಡಿ ಕಾಡಾಡಿಗಳಾ । ಮಗಳೆಂದೂ ಜಿಡ ।
ಬೇಡೈ ಇಂದೂ । ಮಾಡುವಳು ನಿನ್ನೆಯ ಶೇವೆಗಳೊಂದೂ । ಬಿಡದಲೆ ದಯಾ
ಸಿಂಧೂ ।
ನೋಡು ನುಡಿದ ಎನ್ನಯ ನುಡಿಗಳನೂ । ಮಾಡುವಳೊ ನಿಜ ।
ಸುಜನ ಜನಾರ್ದನ ॥೨॥
ಬಯಸೀ ಬಗೆ ಬಗೆಯಾ ಭರಣಗಳನ್ನೂ । ಪತಿರಾಯಾ ಮನವನ್ನೂ । ನೋಯಿ
ಸೂವ ನಾರಿಯರಾ ।



**ಕೃಷ್ಣ**:- ತಥಾಸ್ತು. ( ಜಾಂಬುವತಿಯ ಪಾಣಿಗ್ರಹಣ )

ಗುಣಶೀಲನೂ |. ಅರಿಯುಳು ವಂದನ್ನೂ | ಸುಯಶವಂತನೇ |
ಅಣವೆಯು ಹುಡುಗಿಯು | ಕಲುಸಾಧ್ವಿಯು ಬಡಿವಾರವಲ್ಲನ್ನೈ ॥

ಅಂತಃಕರಣಪೂರ್ವಕವಾಗಿ ನನ್ನ ತನುಜಾತೆಯನ್ನು ನಿನಗರ್ಪಿಸುವವಲ್ಲದೇ ? ವರದಕ್ಷಿಣೆಯಲ್ಲಿ, ಆ ಶಿರಿಯ ಮೇಲೆ ವರದಕ್ಷಿಣೆಗಾಗಿ ಮಣಿಯನ್ನೂ ನೀಡಿದ್ದೇನೆ. ದಯವಿಟ್ಟು ಸ್ವೀಕರಿಸಿ ಬಡವನನ್ನು ಕೃತಾರ್ಥನನ್ನಾಗಿ ಮಾಡಬೇಕು.

[ಜಾಂಬುವತಿಯನ್ನು ಕೃಷ್ಣನ ಕೈಯಲ್ಲಿ ಕೊಡುವನು ಸಕಲರೂ ಸಂತೋಷಪಡುವರು)

**ಕೃಷ್ಣ:**– ತಥಾಸ್ತು ತಥಾಸ್ತು.

**ವಿಜಯ:**– ಏನು ಏನು ? ಕೃಷ್ಣಯ್ಯಾ ? ಏನಿದು ?

**ಕೃಷ್ಣ:**– ಇವಕ್ಕೆ ಪಾಣಿಗ್ರಹಣವಿಧಿಯನ್ನುತ್ತಾರೆ.

**ವಿಜಯ:**– ಅಂದರೆ ! ಈ ವಿಷಯದ್ಧಲ್ಲಿ ವಿಚಾರ ಮಾಡಿದಿಯಾ ?

**ಕೃಷ್ಣ:**– ಯಲೋ ! ಆಚಾರವಾದನಂತರದಲ್ಲಿ ವಿಚಾರವನ್ನು ಮಾಡುವದು ಸಮಂಜಸರ ಲಕ್ಷಣವಲ್ಲಾ.

**ವಿಜಯ:**– ಹಾಗಂದರೇನು ? ನೀನು ಯಾರು ? ಈ ಜಾಂಬುವಂತರಾಜನಾರು ? ನಿನ್ನ ಕುಲವೇನು ? ಈತನ ಕುಲವೇನು ? ನಿನ್ನ ಯೋಗ್ಯತೆಯತ್ತು ? ಆತನ ಯೋಗ್ಯತೆಯತ್ತು? ಏನು ಒಂದಕ್ಕೊಂದು ಸಮ್ಮಂಧವೇ ಇಲ್ಲ. ಹೀಗೆ ಮಾಡುವದು ಯಾದವ ಜನಾಂಗಕ್ಕೆ ಒಪ್ಪಿಗೆಯಾಗಬಹುದೆ.

**ಕೃಷ್ಣ:**– ಬೇಕಾದರೆ ಅವರು ನನ್ನನ್ನು ಕುಲದಿಂದ ಹೊರಗಿರಿಸಲಿ. ಸುಖವಾಗಿರುವೆನು. ನಾನೇನೋ ಜಾತಿಯಿಂದ ಅನಾರ್ಯನಾಗಿಯೂ ಕೃತಿಗಳಿಂದ ಆರ್ಯಶ್ರೇಷ್ಠನಾಗಿರುವ ಜಾಂಬುವಂತ ರಾಜನ ಕುವರಿಯ ಪಾಣಿಗ್ರಣವನ್ನು ಮಾಡಿದ್ದು ಸರ್ವಸಿದ್ಧ.

**ವಿಜಯ:**– ನಿನ್ನಗೂಡ ಮಾತುಗಳನ್ನಾಡುವದೇ ಕಷ್ಟವಪ್ಪಾ.

**ಕೃಷ್ಣ:**– ಹಾಗಾದರೆ ಸುಮ್ಮನಿರು.

**ವಿಜಯ:**– ಅಲ್ಲಾ– ......

**ಕೃಷ್ಣ:**– ಎನಲ್ಲಾ ? ನಿನ್ನ ತಲೆ ?

**ವಿಜಯ:**– ಜಾಂಬುವತೀದೇವಿಯವರು ರೂಪಸಂಪನ್ನೆಯರೂ ಗುಣಸಂಪನ್ನೆಯರೇನೋ ನಿಜ. ಆದರೆ ಯಾವ ಕುಲದವರು?

**ಕೃಷ್ಣ:**– ಅಪ್ರಬುದ್ಧ ಆರ್ಯರ ಹೇಳ್ಳಿಕೆಯಲ್ಲಿ ಹೇಳುವದಾದರೆ ಕರಡಿಯ ಕುಲದವರೆಂದು ಪರಿಷ್ಕಾರವಾಗಿ ಹೇಳಬಾರದೇ! ಅನುಮಾನವೇಕೆ?

**ವಿಜಯ:**– ನೋಡು. ಅಂತಹ ಹೀನ ಕುಲದವರನ್ನು ಮದುವೆಯಾದರೆ ನಿನಗೆ ಮರ್ಯಾದೆಯು ಬರಬಹುದೇ?

**ಕೃಷ್ಣ:**– ವಿಜಯಾ! ನನಗೆ ಆಡಾಂಭಿಕ ಮರ್ಯಾದೆಯು ಬೇಡವೇ ಬೇಡ. ಅಲ್ಲದೇ ಗುಣಕರ್ಮಾದಿಗಳಿಂದ ಜಾತಿ ನಿರ್ಣಯವನ್ನು ಮಾಡತಕ್ಕ ನಾನು ಇಂತಹ ಜಾಂಬುವಂತನ ಜನಾಂಗದವರನ್ನು ಭಯವಿಲ್ಲದೆ, ಆರ್ಯರಲ್ಲಿ ಗಣಿಸುವೆನು ಮತ್ತೂ. ದುರಾಚಾರವಿಚಾರಗಳಲ್ಲಿ ಮಗ್ನರಾದ ಆರ್ಯರನ್ನು ಅತಿ ಶೂದ್ರರಲ್ಲಿ ಗಣಿಸುವೆನು.

**ವಿಜಯ:**– ಆಗಲಿ ಏನೇನು ಮಾಡುವೆಯೋ ಮಾಡು.

**ಕೃಷ್ಣ:**– ನಾನು ಮಾಡುವದನ್ನೆಲ್ಲ ನೀನು ಸುಮ್ಮನೇ ನೋಡು.

**ವಿಜಯ:**– ಅಷ್ಟೇ ಸರಿ.

**ಕೃಷ್ಣ:**– ಅಷ್ಟೇ ಸರಿ.

**ರಾಜ:**– ಅಂತೂ ವಿಜಯನ ಸಮಾಧಾನವಾಯಿತು.

**ಕೃಷ್ಣ:**– ನನ್ನ ಕೃತಿಗಳಿಗೆಲ್ಲ ಅವನು ಹೃತ್ಪೂರ್ವಕವಾಗಿ ಸಮಾಧಾನಪಡುತ್ತಾನೆ. ಆದರೆ ಏನೋ ಮಧ್ಯದಲ್ಲಿ ಕೊಂಚ ವಿನೋದ.

**ರಾಜ:**– ಆಗಲೀ ಕೃಷ್ಣದೇವನೇ! ನಿನ್ನ ಕೃಪೆಯಿಂದ ನನ್ನ ಕೋರಿಕೆಗಳೆಲ್ಲವೂ ಪೂರ್ಣವಾದವು. ಇನ್ನು ಲೌಕಿಕದಂತೆ ನಿಮ್ಮ ವಿವಾಹ ಸಮಾರಂಭಗಳನ್ನು ಜರಗಿಸುವದಕ್ಕಪ್ಪಣೆಯಾಗಬೇಕು.

**ಕೃಷ್ಣ:**– ಅದು ದ್ವಾರಕೆಯಲ್ಲಿ ಬಲಭದ್ರ ಮಹಾರಾಜರ ಸಮ್ಮುಖದಲ್ಲಿಯೇ ಜರಗತಕ್ಕದ್ದು.

**ರಾಜ:**– ಆಗಲಿ ತಮ್ಮ ಅಭಿಪ್ರಾಯದಂತೆ ಆಗಲಿ.

**ಕೃಷ್ಣ:-** ಹಾಗಾದರೆ ಆಲಸ್ಯದಿಂದ ಪ್ರಯೋಜನವಿಲ್ಲ. ತೀವ್ರ ಸಕಲರೂ ದ್ವಾರಕೆಗೆ ಹೊರಡುವ ಸಿದ್ಧತೆಯನ್ನು ಮಾಡಿರಿ.

**ರಾಜ:-** ತಥಾಸ್ತು. ಪಾರುಪತ್ಯಗಾರರೇ! ನಾಳಿಗೇನೇ ಸಕಲ ಪರಿವಾರ ದೊಂದಿಗೆ ದ್ವಾರಕೆಗೆ ಹೊರಡುವ ಸಿದ್ಧತೆಯನ್ನು ಮಾಡಿಸಿ.

**ಕೃಷ್ಣ:-** ವಿಜಯಾ ನಮ್ಮ ಉದ್ದೇಶ್ಯವು ಸಾಧ್ಯವಾಯಿತಷ್ಟೇ!

**ವಿಜಯ:-** ಒಂದೇಕೆ? ಎರಡು (ಕೃ ಪರಿಜ ನಿರ್ಗಮನ.)

—: **೪ನೇ ಅಂಕ ಸಮಾಪ್ತಿ** :—

## ೫ನೇ ಅಂಕ ಪ್ರಾರಂಭ



(ಪ್ರವೇಶ ೧ ದ್ವಾರಕಾ॥ ಬೀದಿ ॥ ಕಂಚುಕಿಯು ಸಚಿಂತನಾಗಿ)

**ಕಂಚುಕಿ:**– ಆ ಹಾಳು ಮಣಿಯ ಸಲುವಾಗಿ ನಮ್ಮ ಶ್ರೀಕೃಷ್ಣದೇವರು ದ್ವಾರಕೆಯನ್ನು ಬಿಟ್ಟು ಹೋದಂದಿನಿಂದ ಈ ನಗರವು ಹಾಳು ಸುರಿಯುತ್ತಲಿದೆ. “ದೇವರಿಲ್ಲದ ದೇವಾಲಯವಾಗಿದೆ.” ಅಥವಾ “ಜೀವವಿಲ್ಲದ ದೇಹ”ವಾಗಿದೆ, ಏನು ಈ ಯಾದವರು ಮತ್ಸರಗ್ರಸ್ತರಾಗಿ ಶ್ರೀಕೃಷ್ಣದೇವರನ್ನು ಕಳೆದುಕೊಂಡು ಬಿಟ್ಟರು.

**ಸತ್ರಾಜಿ:**– ಏನು ಕಂಚುಕಿ! ಅರಮನೆಯ ವರ್ತಮಾನವೇನು? ಕೃಷ್ಣರಾಜರ ಶೋಧವಾಯಿತೆ?

**ಕಂಚುಕಿ:**– ಇಲ್ಲ ಮಹಾಸ್ವಾಮೀ! ಎಲ್ಲಿಯದು? ಸಕಲ ದಿಕ್ಕುಗಳಿಗೆ ಹೋದ ಚಾರರೆಲ್ಲರೂ ಮರಳಿ ಬಂದರು ಒಬ್ಬರಿಗೂ ಕೃಷ್ಣರಾಜರ ಶೋಧವಾಗಲಿಲ್ಲವಂತೆ.

**ಸತ್ರಾಜಿ:**– ಕಷ್ಟವು, ಕಷ್ಟವು, ಯಾದವರಾದ ನಮ್ಮವರಗಳ ಮತ್ಸರ ಬುದ್ಧಿಗೆ ಬೇಸತ್ತು ಜಿಗುಪ್ಸೆ ಹುಟ್ಟಿದವನಾಗಿ ನಮ್ಮ ಲೋಕಮಾನ್ಯ ಮುಂದಾಳುವು ನಮ್ಮನ್ನು ಬಿಟ್ಟು ಹೋದನು. ನಮ್ಮ ಏಳ್ಗೆಗೆ ವಿಘ್ನವನ್ನು ಕಲ್ಪಿಸುವ ಶತ್ರುಗಳೊಡನೆ ಶೂರತ್ವದಿಂದ ಹೋರಾಡುವ ನಮ್ಮ ದೇಶಬಂಧುವು ಸ್ವಕೀಯರಲ್ಲಿ ಬೆಳೆದ ಮತ್ಸರಬುದ್ಧಿಯನ್ನು ನೋಡಲಾರದೇ ಮಾಯವಾದನು. ಅಯ್ಯೋ! ಇನ್ನು ಮುಂದೇನು? ಮಾಡುವದು? ಒಂದು ಹಾಳು ಮಣಿಯ ಸಲುವಾಗಿ ಪ್ರತ್ಯಕ್ಷ ದಿನಮಣಿಯನ್ನೇ ಕಳೆದುಕೊಂಡು ಬಿಟ್ಟೆವಲ್ಲಾ! ಹುಶ್. ಮಾಡುವದೇನು? “ಬುದ್ಧಿಃ ಕರ್ಮಾನುಸಾರಿಣಿ” ಇರಲಿ ಕಂಚುಕೀ ಈ ಸಮಯಕ್ಕೆ ಮಹಾರಾಜರೆಲ್ಲಿ?

**ಕಂಚುಕಿ:**– ಅವರು ಗರ್ಗ ಗುರುಗಳ ಆಶ್ರಯದಲ್ಲಿರುವರು. ಸಚಿವ ಸಾಮಂತರಾರಾದರೂ ಬಂದರೆ ಅತ್ತವೇ ಕಳಿಸುವದಕ್ಕೆ ಅಪ್ಪಣೆಯಾಗಿದೆ

ಇಷ್ಟವಿದ್ದರೆ ದಯಪಾಲಿಸಬಹುದು.

**ಸತ್ರಾಜಿ:–** ನಡೆ ಅತ್ತವೇ ಹೋಗುವಾ (ಹೋಗುವರು)

॥ಅಶ್ರವು॥ ಪ್ರವೇಶ॥ ಗರ್ಗ, ಬಲರಾಮ॥

**ಗರ್ಗ:–** ಬಲಭದ್ರಮಹಾರಾಜನೇ! ನೀನು ಕೇಳುವ ಪ್ರಶ್ನೆಯ ವೇಳಾ ಲಗ್ನವು ಸೂರ್ಯಾಸ್ತದೊಳಗಾಗಿ ಅಂದರೆ ಇನ್ನೊಂದರ್ಧ ಘಳಿಗೆಯಲ್ಲಿಯೇ ಕೃಷ್ಣಚಂದ್ರರ ಶುಭಾಗಮನವನ್ನು ಸೂಚಿಸುತ್ತಲಿದೆ.

**ಬಲ:–** ಗುರುಗಳೇ ಹಾಗಿರುವದೇ! ಹಾಗಿದ್ದರೆ ನೋಡಿ. ಅವನು ಬಂದ ಕೂಡಲೇ ನಾನಿನ್ನು ರಾಜ್ಯಕಾರಭಾರದ ಜಂಜಾಟವನ್ನು ಅವನ ಮೇಲೆ ಹಾಕಿ ಮುಕ್ತನಾಗಬೇಕೆಂದಾಲೋಚಿಸಿದ್ದೇನೆ

**ಗರ್ಗ:–** ನೀನು ಹಾಗೆ ಹೇಳುವಿಯಾದರೂ ದೇವನಾದ ಕೃಷ್ಣನು ರಾಜನಾಗಲೊಪ್ಪನು. ಆತನು ನಿಮಿತ್ತಕ್ಕಾಗಿ ನಮ್ಮಾತನಾಗಿರುವನಲ್ಲದೇ ನಿಜವಾಗಿಯೂ ಸರ್ವ ಜಗದ ಸುಸಂಬಂಧಿಯು. ಈ ಯಾದವರು ಅವನನ್ನು ನಮ್ಮಾತನೆಂದು ಹೊಗಳಿಕೊಳ್ಳುವದು ವೃಥಾ ಅಭಿಮಾನವು. ಅವನು ಒಂದು ದೇಶದ ರಾಜನಲ್ಲ, ಇಡೀ ಬ್ರಹ್ಮಾಂಡದ ರಾಜನು. ಬೇಕಾದರೆ ಅವನು ಬಂದ ಕೂಡಲೇ ನನ್ನ ಮಾತಿಗೆ ಪರಿಷ್ಕಾರವನ್ನು ಮಾಡಿಕೊಳ್ಳಬಹುದು.

**ಕಂಚುಕಿ:–** (ಬಂದ ನಮಿಸಿ) ಗುರುಗಳೇ! ಮತ್ತು ಮಹಾರಾಜರೇ! ಶ್ರೀಕೃಷ್ಣದೇವರು ಯಾವದೋ ಒಂದು ವಿಜಾತಿಯ ಜನಗಳೊಂದಿಗೆ ಬರುತ್ತಿರುವರು. ಅವರ ಮುಖಶ್ರೀಯು ಮಂದಹಾಸದಿಂದ ಒಪ್ಪುತ್ತಿರುವದು.

**ಸಕಲರೂ:–** ಏನು ಕೃಷ್ಣ ಚಂದ್ರನು ಬಂದನೇ? ನಡಿಯಿರಿ ಆತನಿಗೆ ಸ್ವಾಗತವನ್ನೀಯುವಾ?

**ಗರ್ಗ:–** ಇದೇನು ಸಂಗಡ ಕರಡಿಗಳ ಗುಂಪು?

**ಕಂಚುಕಿ:–** ಅದೋ ಅವರು ಬಂದೇ ಬಿಟ್ಟರು.

**ಕೃಷ್ಣ:–** (ಬಂದು ನಮಿಸಿ) ಗುರುಗಳಡಿದಾವರೆಯಲ್ಲಿ ನಮಸ್ಕರಿಸುವೆನು. ಪಿತೃ ಸಮಾನರಾದ ಅಣ್ಣನೆಂದು ಶಿರಸಾಷ್ಟಾಂಗವೆರಗುವೆನು. ದ್ವಾರಕಾಧೀಶನೆಂದು ಸನ್ಮಾನಿಸುವೆನು.

**ರಾಜ:**– ವನರಾಜನಾದ ಈ ಜಾಂಬುವಂತನು ಯಾದವೇಂದ್ರರಿಗೂ ಅವರ ಗುರುಗಳಿಗೂ ವಂದಿಸುವನು.

**ಬಲ:**– ಏನು? ತಾವು ರಾಮಾಯಣ ಕಾಲದ ಜಾಂಬುವಂತ ದೇವರವಂಶ ಜರೇ ?

**ರಾಜ:**– ಅಹುದು ಮಹಾನುಭಾವಾ !

**ಬಲ:**– ಶ್ರೀರಾಮದೇವರ ಸೇವೆಯನ್ನು ಮಾಡಿದ ನಿಮ್ಮ ಮೂಲಪುರುಷ ರಾದ ಜಾಂಬುವಂತ ದೇವನೂ, ಮತ್ತು ಆತನ ವಂಶಜರೂ ಪರಮ ಪಾವನರು.

**ಸತ್ರಾಜಿ:**– ರಾಮಸೇವೆಯನ್ನು ಮಾಡಿದ ಜಾಂಬುವಂತ ದೇವರು ಕರಡಿ ಯಾಗಿದ್ದಾರೆಂದು ಕೇಳಿದ್ದೇವೆ. ಆದರೆ ಇವರು ಸಾಧಾರಣ ಕೂದಲು ಗಳುಳ್ಳ ಮನುಷ್ಯರಾಗಿದ್ದಾರಲ್ಲವೇ ?

**ವಿಜಯ:**– ರಾಮಾಯಣ ಕಾಲದಲ್ಲಿ ಉದ್ದವಾಗಿದ್ದ ಇವರ ಮೈಗೂದಲು ಗಳು ಈಗ್ಗೆ ಕೃಷ್ಣಾವತಾರದಲ್ಲಿ ಸವೆಯುತ್ತಾ ಸವೆಯುತ್ತಾ ಕಿರಿದಾಗಿ ಬಿಟ್ಟಿವೆ. ಅಂತೇ ಇವರ ಮಾನವೀ ರೂಪವು ಬೈಲಿಗೆ ಬಿದ್ದಿದೆ.

**ಕೃಷ್ಣ:**– ಏನು ವಿಜ್ಞಾನಶಾಸ್ತ್ರ ಕೋವಿದನೋ ?

**ರಾಜ:**– ಮಗೂ ಗುರು ಹಿರಿಯರಿಗೆ ನಮಸ್ಕಾರವನ್ನು ಮಾಡು.

**ಗರ್ಗ:**– ಈ ಕುಮಾರಿ ಯಾರು?

**ಕೃಷ್ಣ:**– ಜಾಂಬುವಂತ ರಾಜನ ಮಗಳು

**ರಾಜ:**– ಶ್ರೀಕೃಷ್ಣದೇವರ ಸತಿಯುಳು ದೇವಾ !

**ಕೃಷ್ಣ:**– ಜಾಂಬುವಂತರಾಜನೇ ! ವಿಶದವಾದ ಸಂಗತಿಯನ್ನು ಆ ಮೇಲೆ ಹೇಳುವಿರಂತೆ ಸದ್ಯಕ್ಕೆ ಮುಖ್ಯಾಂಶವೇನಿದೆಯೊ? ಅದನ್ನಷ್ಟು ತಿಳಿಸಿ ಬಿಡಿ.

**ರಾಜ:**– ದ್ವಾರಕಾಧೀಶನೇ ! ಈಗ್ಯೆ ಸಮೀಪಕ್ಕೆ ಮೂರು ತಿಂಗಳುಗಳಾಚೆಗೆ ಬೇಟೆಯಾಡಲಿಕ್ಕೆ ನಿಬಿಡವಾದ ಕಾನನಕ್ಕೆ ಹೋಗಿದ್ದೆನು. ಅಲ್ಲೊಂದು ಶಾರ್ದೂಲವು ಮಾನವನೋರ್ವನನ್ನು ಹರಿದು ತಿನ್ನುವದನ್ನು ಕಂಡೆನು

ಕೂಡಲೇ ಅದನ್ನು ಸಂಹರಿಸಿದೆನು. ಅಲ್ಲಿ ಆ ಮೃತನ ಅವಶಿಷ್ಟ ಅವ ಯವಗಳ ಜತೆಯಲ್ಲಿ ಇದೋ ಈ ಕಿರೀಟ ಕುಂಡಲಗಳೂ ಈ ಬಿಲ್ಲು ಬತ್ತಳಿಕೆಗಳೂ ಮತ್ತು ಈ ಮಹಾಮಣಿಯೊಂದಿಗಿರುವ ಒಂದು ಹಾರವೂ ಬಿದ್ದಿತ್ತು.

**ಸತ್ರಾಜಿ**:– (ನೋಡಿ) ಇದೇ ಆ ಶ್ಯಮಂತಕಮಣಿಯು. ಮತ್ತು ಇದೇ ನನ್ನ ಬಂಧುವಿನ ಕಿರೀಟ ಕುಂಡಲಗಳೂ ಹಾಯ್ ಬಂಧುವೇ! ಕಣ್ಣುಗಳಿಗೆ ಕಾಣದಾದೆಯಾ? (ಶೋಕಿಸುವನು).

**ಗರ್ಗ**:– ಸತ್ರ್ರಾಜಿತನೇ! ಶೋಕವನ್ನು ಸಹಿಸಿ. ವಿವೇಕವನ್ನು ತಾಳು ಮಾಡುವದೇನು? ಈಶ್ವರೀ ಸಂಕೇತಗಳನ್ನು ಮೀರುವವರಾರು? (ಜಾಂಬುವಂತನಿಗ) ಮುಂದೆ?

**ರಾಜ**:– ಇವೆಲ್ಲಾ ಸಾಮಗ್ರಿಗಳನ್ನೂ ನಾನು ನನ್ನ ಸ್ವಾಧೀನಪಡಿಸಿಕೊಂ ಡೆನು ಮನೆಗೆ ಹೋದ ನಂತರದಲ್ಲಿ ಇದು ಸುವರ್ಣವನ್ನು ಪ್ರಸವಿಸುವ ಮಣಿಯೆಂದು ಗೊತ್ತಾಯಿತು. ಆಗ್ಗೆ ಇದನ್ನು ದೇವರ ಜಗುಲಿಯ ಮೇಲಿಟ್ಟು ಪೂಜಿಸಿ ನಿತ್ಯದಲ್ಲೂ ಸುವರ್ಣವನ್ನು ಪಡೆದು, ದಾನಧರ್ಮಾದಿಗಳನ್ನು ಮಾಡುತ್ತಲಿದ್ದೆನು. ಕೆಲವು ದಿನ ಗತಿಸಿದ ನಂತರದಲ್ಲಿ ಶ್ರೀಕೃಷ್ಣದೇವರು ನಮ್ಮಲ್ಲಿಗೆ ಬಂದು "ಇದು ನಮ್ಮ ದೇಶೀ ಯರ ಮಣಿಯು ನಮಗೆ ಕೊಡಬೇಕೆಂ"ದು ಕೇಳಿದರು. ನಾನು ಕೊಡ ಲಿಲ್ಲ ಆ ಮೇಲೆ ಮಣಿಯ ಸಲುವಾಗಿ ಉಗ್ರವಾದ ಕಾಳಗವನ್ನು ಮಾಡಿ ನನ್ನನ್ನು ಸೋಲಿಸಿ...............

**ಕೃಷ್ಣ**:– ಜಾಂಬುವಂತರಾಜನೇ! ನಿಜವಾದ ಸಂಗತಿಯನ್ನು ಹೇಳು; ಯು ದ್ಧದಲ್ಲಿ ನಾನೇ ಸೋತೆನಲ್ಲವೇ?

**ವಿಜಯ**:– ಅದಕ್ಕೆ ನಾನು ಸಾಕ್ಷೀದಾರನಾಗಿದ್ದೇನೆ " ಕೃಷ್ಣಯ್ಯನವರು ಸೋತದ್ದು ನಿಜ.

**ರಾಜ**:– ಕಾಯಬಲದಿಂದ ನಾನು ಸೋಲದಿದ್ದರೂ, ಮನೋಬಲದಿಂದ ಹೀನನಾಗಿ ಸೋತು ಪ್ರಭುವಿಗೆ ನನ್ನ ಕುಮಾರಿಯನ್ನೂ, ವರದಕ್ಷಿಣೆ ಯಲ್ಲಿ ಆ ಮಣಿಯನ್ನೂ, ಅರ್ಪಣ ಮಾಡಿದ್ದೇನೆ. ದಯಾಳುವಾದ ಶ್ರೀಕೃಷ್ಣ ದೇವನು ಅವುಗಳನ್ನು ಸ್ವೀಕರಿಸಿ ನನ್ನನ್ನುದ್ಧರಿಸಿದನು.

**ಕೃಷ್ಣ:**— ಸತ್ರಾಜಿತ ಸರ್ದಾರರೇ ತೆಗೆದುಕೊಳ್ಳಿ. ನಿಮ್ಮ ಮಣಿಯನ್ನು

**ಸತ್ರಾಜಿ:**— ಸ್ವಾಮಿ! ನನಗೆ ಸ್ವಲ್ಪ ಮನೆಗೆ ಹೋಗಿ ಬರಲವಕಾಶವನ್ನು ಕೊಡಬೇಕು. ಬಂದನಂತರದಲ್ಲಿ ನನ್ನ ವಿತ್ತನ್ನು ಸ್ವಾಧೀನಪಡಿಸಿ ಕೊಳ್ಳುವೆನು.

**ಎಲ್ಲರೂ:**— ಹಾಗೆ ಮಾಡಬಹುದು.

**ಗರ್ಗ:**— ಬಲಭದ್ರ ಮಹಾರಾಜನೇ ಈಗಿನ ಸಮಾಚಾರವು ಪೂರ್ವೇತಿ ಹಾಸದ ಒಂದು ಸ್ಮೃತಿಯನ್ನು ಕೊಟ್ಟಿತು. ಅದೇನೆಂದರೆ ರಾಮಾ ಯಣ ಕಾಲದಲ್ಲಿ ಜಾಂಬುವಂತ ದೇವನು ತನ್ನ ಭುಜಗಳ ತಿಂಡೆಯು ಕಡಮೆಯಾಗಲಿಲ್ಲವೆಂತಲೂ, ಆ ಯುದ್ಧಾಪೇಕ್ಷೆಯನ್ನು ಪೂರ್ಣ ಮಾಡು ವಂತೆ, ಶ್ರೀರಾಮಚಂದ್ರ ದೇವರಿಗೆ, ವರವನ್ನು ಬೇಡಿಕೊಂಡಿದ್ದನು. ಅದನ್ನು ಕೃಷ್ಣಾವತಾರದಲ್ಲಿ, ಪೂರ್ಣ ಮಾಡುವೆನೆಂದು, ಪ್ರಭುವು ಅಪ್ಪಣೆ ಕೊಟ್ಟಿದ್ದನು. ಅದೇ ಪ್ರಕಾರವಾಗಿ ಆ ರಾಮಚಂದ್ರ ದೇವರೇ ಈ ಕೃಷ್ಣದೇವನಾಗಿಯೂ, ಆ ಜಾಂಬುವಂತ ದೇವರೇ ಈ ಜಾಂಬು ವಂತ ದೇವನಾಗಿಯೂ ಅವತರಿಸಿ ತಮ್ಮ ತಮ್ಮ ವಚಗಳನ್ನೂ ಕೋರಿ ಕೆಗಳನ್ನೂ, ಕ್ರಮವಾಗಿ ಈಡೇರಿಸಿಕೊಂಡಿದ್ದಾರೆ. ಈ ಸಂದರ್ಭದ ಪೂರ್ವ ಪೀಠಿಕೆಯನ್ನು ಬೇಕಾದರೆ ರಾಮಾಯಣ ಮೂಲ ಗ್ರಂಥದಲ್ಲಿ ನೋಡಿಕೊಳ್ಳಿ. (ಸತ್ರಾಜಿತ ಮಗಳ ಸಮೇತ ಬಂದು)

**ಸತ್ರಾಜಿ:**— ಗುರುಗಳೇ! ಮಹಾರಾಜರೇ! ಮತ್ತು ಇತರ ಬಾಂಧವರೇ! ಈ ಮಹಾನುಭಾವನಾದ ಜಾಂಬುವಂತ ದೇವನು ಶ್ರೀ ಕೃಷ್ಣದೇವನ ರಹಸ್ಯವನ್ನು ತಿಳಿದ ಮಹಾಜ್ಞಾನಿಯು ಈತನನ್ನು ನಾನು ನನ್ನ ಗುರು ವೆಂದು ಭಾವಿಸಿ ಈತನ ರೀತಿಯನ್ನೇ ಅನುಸರಿಸುವೆನು ಅದು ಹೇಗೆಂದರೆ? ಇವಳು ನನ್ನ ಉಪವರಕುಮಾರಿಯಾದ ಸತ್ಯಭಾಮೆಯು ಇವಳನ್ನು ಸಕಲ ಗುರುದೇವ ಬ್ರಾಹ್ಮಣರ ಸಮಕ್ಷಮವೇ ಕೃಷ್ಣಾ ರ್ಪಣ ಮಾಡಿ, ವರದಕ್ಷಿಣೆಗಾಗಿ ಇದೇ ಮಣಿಯನ್ನರ್ಪಿಸುವೆನು. ಶ್ರೀ ಕೃಷ್ಣದೇವನು ಸ್ವೀಕರಿಸಿ ನನ್ನನ್ನುದ್ಧರಿಸಲಿ.

**ಗರ್ಗ:**— ಶ್ರೀಕೃಷ್ಣ ದೇವನೇ ಸತ್ರಾಜಿತನ ಇಚ್ಛೆಯನ್ನು ನೇರವೇರಿಸು.

**ಶ್ರೀಕೃಷ್ಣ:**— ತಥಾಸ್ತು. (ಸಕಲರೂ ಕೈತಟ್ಟುವರು)